(ಮುಂಬೈಯ ಕರ್ನಾಟಕದ ಮಾಧ್ಯಮಿಕಶಾಲಾ ಪಠ್ಯಪುಸ್ತಕವಾಗಿ ಅರಿಸಲ್ಪಟ್ಟದ್ದು)

# ಕರ್ನಾಟಕ ಸುಕಾವ್ಯ ರತ್ನಮಾಲಾ.

ಪ್ರಥಮ ಮಣಿ.

ಕವಿರಾಜ ಬೊಬ್ಬೂರ ರಂಗಪ್ಪನಿಂದ ರಚಿತವಾದ

# ಪರಶುರಾಮ ರಾಮಾಯಣ.

ಮೊದಲನೆಯ ಭಾಗ.

(ಲಘು ಟಿಪ್ಪಣಿ ಸಹಿತವಾದದ್ದು.)

ಇದು

ವೆಂಕಪ್ಪಾ ಪರಮಯ್ಯಾ ಹೆಗ್ಗಡೆ, ಕಡೇಕೋಡಿ,

ಇವರಿಂದ ಸಂಶೋಧಿಸಿ ತಿದ್ದಲ್ಪಟ್ಟು

ಕರ್ನಾಟಕ ಸುಕಾವ್ಯ ರತ್ನಾಗಾರದಲ್ಲಿ ಪ್ರಕಟಿಸಲ್ಪಟ್ಟಿತು.

ಧಾರೇಶ್ವರ.

ದ್ವಿತೀಯ ಮುದ್ರಣ.



ಕುಮಟಾ ಶ್ರೀ ರಾಮಕೃಷ್ಣ ಪ್ರಿಂಟಿಂಗ ವರ್ಕ್ಸ ಲಿಮಿಟೆಡ್ ಇಲ್ಲಿ ಮುದ್ರಿಸಲ್ಪಟ್ಟಿತು.

ಶಕೆ ೧೮೪೯.

ಬೆಲೆ ೦-೮-೬.

(ಮುಂಬೈಯ ಕರ್ನಾಟಕದ ಮಾಧ್ಯಮಿಕಶಾಲಾ ಪಠ್ಯಪುಸ್ತಕವಾಗಿ ಆರಿಸಲ್ಪಟ್ಟದ್ದು)

# ಕರ್ಣಾಟಕ ಸುಕಾವ್ಯ ರತ್ನಮಾಲಾ.

## ಪ್ರಥಮ ಮಣಿ.

ಕವಿರಾಜ ಬೊಬ್ಬೂರ ರಂಗಪ್ಪನಿಂದ ರಚಿತವಾದ

# ಪರಶುರಾಮ ರಾಮಾಯಣ.

ಮೊದಲನೆಯ ಭಾಗ.

(ಲಘು ಟಿಪ್ಪಣಿ ಸಹಿತವಾದದ್ದು.)

ಇದು

ವೆಂಕಪ್ಪಾ ಪರಮಯ್ಯಾ ಹೆಗ್ಗಡೆ, ಕಡೇಕೋಡಿ

ಇವರಿಂದ ಸಂಶೋಧಿಸಿ ತಿದ್ದಲ್ಪಟ್ಟು

ಕರ್ಣಾಟಕ ಸುಕಾವ್ಯ ರತ್ನಾಗಾರದಲ್ಲಿ ಪ್ರಕಟಿಸಲ್ಪಟ್ಟಿತು.

ಧಾರೇಶ್ವರ.

ದ್ವಿತೀಯ ಮುದ್ರಣ.



ಕುಮಟಾ ಶ್ರೀ ರಾಮಕೃಷ್ಣ ಪ್ರಿಂಟಿಂಗ ವರ್ಕ್ಸ್ ಲಿಮಿಟೆಡ್ ಇಲ್ಲಿ ಮುದ್ರಿಸಲ್ಪಟ್ಟಿತು.

ಶಕೆ ೧೮೪೯.

ಬೆಲೆ ೦--೮--೬.



# ಕವಿಚರಿತ್ರೆ.

ಈ ಪರಶುರಾಮ ರಾಮಾಯಣದ ಕರ್ತನ ಹಾಗೂ ಆತನ ಕಾಲದ ವಿಷಯವಾಗಿ ಹೆಚ್ಚಿನ ಸಂಗತಿಗಳು ನಮಗೆ ಇನ್ನೂ ಉಪಲಬ್ಧವಾಗಿಲ್ಲ. ಈತನು ಶೌನಕ ಗೋತ್ರದ (ಸ್ಮಾರ್ತ) ಬ್ರಾಹ್ಮಣನೆಂದೂ ಹಿರಿಯೂರಿನ ಕರಣಿಕನಿದ್ದನೆಂದೂ ತಂದೆಯು ರಂಗಪ್ಪ, ತಾಯಿಯು ರುಕ್ಮಿಣಿಯೆಂದೂ ಈತನ ಹೆಸರು ಬೊಬ್ಬಾರ ರಂಗಪ್ಪನೆಂದೂ ಕವಿರಾಜನೆಂಬ ಬಿರುದಿತ್ತೆಂದೂ ಈತನ ಗ್ರಂಥದಿಂದ ತಿಳಿಯಬಹುದಾಗಿದೆ. ಮೈಸೂರು ಸಂಸ್ಥಾನದ ಚಿತ್ರದುರ್ಗ ಜಿಲ್ಲೆಯೊಳಗಿನ ಹಿರಿಯೂರಿನಲ್ಲಿ ಈ "ಕವಿರಾಜ ಬೊಬ್ಬಾರ ರಂಗಪ್ಪ"ನ ವಂಶಜರು ಈಗಲೂ ಇರುವರು. ಮತ್ತು ಈಗ ಅವರು ಹಿರಿಯೂರು ಮೊದಲಾಗಿ ಆರೇಳು ಗ್ರಾಮಗಳ ವತನದಾರ ಶಾನಭೋಗರಾಗಿರುವರು. ಈ ಹಿರಿಯೂರಿನ ನೆರೆಯಲ್ಲಿರುವ ಬೊಬ್ಬಾರೆಂಬಲ್ಲಿ ರಂಗನಾಥ ದೇವಾಲಯವಿದ್ದು ಅದು ಈ ವಂಶಜರ ಕುಲದೇವತಾಸ್ಥಾನವು. ಈತನ ಕಾಲದ ವಿಷಯವಾಗಿ ಗ್ರಂಥದಲ್ಲಿ ಯಾವ ಅಂಶವೂ ಉಕ್ತವಾಗಿಲ್ಲ. ಹೈದರಅಲ್ಲಿ ಅಥವಾ ಟೀಪೂ ಸುಲ್ತಾನನ ಕಾಲದಲ್ಲಿ ಈತನು ಇದ್ದಿರಬಹುದೆಂದು ಕೆಲವರು ತರ್ಕಿಸುತ್ತಿರುವ ತರ್ಕಕ್ಕೆ ನಮ್ಮ ಸಮ್ಮತವಿಲ್ಲ ಭಾಷಾಶೈಲಿಯನ್ನೂ ಅದರಲ್ಲಿ ಬರಹಗಾರರಿಂದ ಒದಗಿದ ದೋಷಗಳನ್ನೂ ಪರೀಕ್ಷಿಸುವದರಿಂದ ಈತನು ಲಕ್ಷ್ಮೀಶನಿಗಿಂತಲೂ ಪೂರ್ವದವನಿರಬೇಕೆಂದು ಮತ್ತೆ ಕೆಲವರು ತರ್ಕಿಸುತ್ತಿರುವರು. ೧೩, ೧೪ ನೆಯ ಶತಮಾನಗಳ ನಡುವೆ ಈತನು ಇದ್ದಿರಬಹುದೆಂದು ಭಾವಿಸಿದರೆ ಹೆಚ್ಚು ಪ್ರಶಸ್ತವಾಗಬಹುದೆಂದು ನಮ್ಮ ಅಭಿಪ್ರಾಯವಿದೆ. ಇದೇ ಕವಿವರನಿಂದ ವಿರಚಿತವಾದ ಅಂಬಿಕಾವಿಜಯವೆಂಬ ಇನ್ನೊಂದು ಭಾಮಿನೀ ಷಟ್ಪದೀ ಕಾವ್ಯವು ೪೩ ಅಧ್ಯಾಯಗಳನ್ನೊಳಗೊಂಡು ಶೋಭಿಸುತ್ತಿರುವದು.

---

# ಮುನ್ನುಡಿ.

॥ ವಾರ್ಧಿಕ ಷಟ್ಪದಿ ॥

ಕನ್ನಡದ ಜೈಮಿನೀ ಭಾರತಾಮೃತಪಾನ-।
ವೆನ್ನಿಸಗದವರಿಲ್ಲವೆಂಬ ನುಡಿ ಧಿಟವಲ್ತೆ ।
ಕನ್ನಡದೆ ಜೈಮಿನೀ ಭಾರತಕ್ಕೆಣೆಯಾದ ಸತ್ಕಾವ್ಯಮೀ ನಾಡಲಿ ॥
ನನ್ನಿಯಿಂದನ್ಯತ್ರವಿಲ್ಲೆಂಬ ನುಡಿಯನೃತ-।
ವೆನ್ನುವಂತುರೆ ಪರಶುರಾಮ ರಾಮಾಯಣವ ।
ಮುನ್ನ ಬೊಬ್ಬೂರ ರಂಗನು ಬಿಡದೆ ರಚಿಸಿರಲದನ್ನು ಮುಂದಜ್ಞ ಜನರು ॥

೨ ಪರಿವಿಡಿಯೊಳೋದಿ ಬರೆದೋದಿ ಬರೆಯುತ್ತೋದಿ ।
ಬರೆಯುಲೆಡೆಗೆಡೆಗೆ ಲೋಪಾಗಮಾದೇಶಗಳು ।
ತುರುಗಿ ದೋಷಾಗಾರವೆನಿಸುತಜ್ಞಾತವಾಗಿಪ್ಪೊಂದು ಪುಸ್ತಕವದು ॥
ಹಿರಿಯೂರ ಬಾಲಿಕಾವಿದ್ಯಾಲಯದ ಮುಖ್ಯ ।
ಗುರುವಾದ ಶೀ.ಬಿ. ನರಸಿಂಹಯ್ಯನಿಗೆ ದೊರೆಯು-।
ಲುರೆ ಮಾತೃ ಭಾಷಾಭಿಮಾನದಲಿ ಶ್ರಮಬಟ್ಟು ಹರಿದು ಹರಡಿದ ಪುಟಗಳ ॥

೩ ಸರಿಪಡಿಸುತೋರಂತೆ ಬಳಿಕ ಮತ್ತೆಲ್ಲಿಯಾ-।
ದರು ಶುದ್ಧವಹ ಮಾತೃಕೆಯು ದೊರೆಯಬಹುದೆನ್ನು-।
ತರಸಿ ಸಿಗದಿರೆ ಮೊದಲು ದೊರೆತ ಪುಸ್ತಕದ ನಕಲನ್ನೆರಡುವರೆ ವರ್ಷದೆ ॥
ಬರೆದು ಮುಗಿಸುತೆ ಮುದ್ರಿಸಲು ಸಹಾಯವು ಸಿಗದೆ ।
ಮೆರೆವ ಕರ್ಣಾಟಕ ಸುಕವಿರತ್ನನಾದ ಹೊಸ-।
ಕೆರೆಯಾ ಚಿದಂಬರಯ್ಯನಿಗೊಪ್ಪಿಸಲಿಕಾಗ ವಿದ್ವಾಂಸರೊಡನದನುರೆ ॥

೪. ದೋಷಮಂ ಸೋಸಿ ತಿದ್ದಿಸಿ ಪ್ರಚುರಪಡಿಸಲೆಂ-।
ಬಾಶೆಯಿಂ ಸಾಹಿತ್ಯ ಪರಿಷತ್ತಿಗೀಯಲವ-
ರೋಸರಿಸಿ ಲೋಪಾಗಮಾದೇಶ ದೋಷಂಗಳಧಿಕಮಿಹುದಿದರೊಳೆನುತೆ ॥
ಮೂಸಿ ವಾಸನೆಗೊಳಿಸಿ ಬೀಸಾಡಲಾಗಿ ಮನ-।
ದಾಶೆಯಳಿಯುರೆ ಚಿಂತಿಪಾ—ಪಂಡಿತಾಳಿಗಾಂ ।
ಕ್ಲೇಶಬಡಬೇಡಿರೆನ್ನಯ ಮಾತೃಭಾಷೆಯಾದುದರಿಂದಿದಂ ಕ್ಷಿಪ್ರದೆ ॥

೫. ತ್ರಾಸೆನಗದೆಷ್ಟಾದರೂ ಬೇಸರಿಸದೇ ಗ್ರ-।
ಯಾಸಕಂಜದೆ ಶೋಧಿಸುತೆ ತಿದ್ದಿ ಮುದ್ರಿಸಿ ಪ್ರ-।
ಕಾಶಮೆಸಗುತ್ತೆ ತಮ್ಮೆಲ್ಲರಾಶೆಯನ್ನೈದೆ ಪೂರ್ಣಪಡಿಸುವೆನೆನ್ನುತೆ ॥
ಭಾಷೆಯಿತ್ತೀಗ್ರಂಥವಂ ತರಿಸಿದೆಂ ಸದಾ-।
ಯಾಸದಿಂ ಶೋಧಿಸುತ್ತುರೆ ತಿದ್ದಿದೆಂ ಶ್ರೀಶಿ-।
ವಾಸನೆನ್ನಕ್ಷಿಗಳ್ಗತಿ ಕರುಣದಿಂದಿತ್ತ ಮಾಲದೃಷ್ಟಿಯಾರುಬಲದಲಿ ॥

೬. ಕಾಸುಗಳಧಿಕಮೆನ್ನೊಳಿಲ್ಲದುದರಿಂ ಮಾತೃ-।
ಭಾಷೆಯಲ್ಲಿಹ ಪರಶುರಾಮ ರಾಮಾಯಣವ ।
ದೇಶಬಾಂಧವರೊಳ್ ಪ್ರಕಾಶಮೆಸಗುವೆನೆನುತೆ ಪೂರ್ವದೊಳ್ ಪಂಡಿತರ್ಗೆ ॥
ಭಾಷೆಯಂ ಕೊಟ್ಟುದಂ ಶೀಘ್ರದಿಂ ಪೂರೈಸ-।
ಲೋಸುಗಂ ಮುದ್ರಿಸುತ್ತೀಗಳಾಂ ಬಿಡದೇ ಪ್ರ-।
ಕಾಶಮೆಸಗಿದೆನಲ್ಪಭಾಗಮಂ ಸ್ವೀಕರಿಸುದಾರಾಶ್ರಯಮನೀಯಿರಿ ॥

೭. ಹರಿಪದದೊಳಿಹ ತರಣಿ ಶಶಿ ಮೇಘಗಳನೈದೆ ।
ಸರಸಿಜೋತ್ಪಲ ಶಿಖಿಗಳನಿಶಮಿಚ್ಛಿಸುವಂತೆ ।
ವರ ಪರಶುರಾಮ ರಾಮಾಯಣದೊಳುಳಿದ ಭಾಗವನು ತಮ್ಮೌದಾರ್ಯದಾ ॥
ನೆರಳಿನ ಸಹಾಯ ಧನದಿಂ ಮುದ್ರಿಸುತ್ತಾಂ ಪ್ರ ।
ಚುರ ಪಡಿಸಿ ವಾಚಕರ ದೃಕ್ಪಥದೊಳೋಡಾಡು-।
ತಿರುವೊಲೀಕ್ಷಿಸಲೆನ್ನುಭಯನೇತ್ರಮಿಚ್ಛಿಸುತೆ ಕರಣಮಂ ಪೀಡಿಸಲಿಕೆ ॥

೮. ಎನ್ನುದರ ಪೋಷಣೆಗೆನುತೆ ಯಾಚಿಸೆನು ಧನವ ।
ಕಣ್ಣೊಳಗಜಸ್ರಮಶ್ರುಗಳನುದುರಿಸುತೆ ಬಲು ।
ಬನ್ನದಿಂ ಶೋಧಿಸುತೆ ಮಿಗೆ ತಿದ್ದಿ ಬರೆದಿಪ್ಪ ಸತ್ಕಾವ್ಯಗಳನು ಮತ್ತೆ ।
ಸನ್ನುತ ಪರಶುರಾಮ ರಾಮಾಯಣದೊಳುಳಿದು-।
ದನ್ನು ಮುದ್ರಿಸುತಾಂ ಪ್ರಚುರಪಡಿಸಲೆಂದು ಸಂ-।
ಪನ್ನ ವಿದ್ವನ್ಮಣಿಗಳೌದಾರ್ಯದಾಶ್ರಯಮನಿಚ್ಛಿಪೆಂ ವೆಂಕಪ್ಪನು ॥

॥ ಕಂದ ॥

ಕನ್ನಡ ಜೈಮಿನಿ ಕಾವ್ಯಕೆ । ನನ್ನಿಯೊಳೀ ಪರಶುರಾಮ ರಾಮಾಯಣ ತಾಂ ॥
ಚನ್ನಗೆ ಸರಿಯಾಗಿರಲುರೆ । ಮನ್ನಿಸಿ ವಿಬುಧಾಳಿ ಬಿಡದೆ ಕೈಕೊಂಬುದಿದಂ ॥೯॥
ತಾತ್ಸಾರಮೆಸಗದೀಕೃತಿ । ಯುತ್ಸಾಹದೊಳೋದಿ ನೋಡಿ ಭಾಷಾಭಿಜ್ಞರ್ ।
ಮಾತ್ಸರ್ಯವನುಳಿದೆನ್ನೊಳ್ । ಪ್ರೋತ್ಸಾಹದೊಳೀಯಲೆನಗಭಿಪ್ರಾಯಗಳಂ ॥೧೦॥
ಕನ್ನಡ ನುಡಿ ಪರಿವಿಡಿಯಂ । ಚನ್ನಗೆ ತಿಳಿದಿರ್ಪ ಸಕಲ ಪಂಡಿತ ನಿಚಯಂ ॥
ಮುನ್ನಿದನಿರದವಲೋಕಿಸಿ । ನನ್ನಿಯಿನೆನಗೀಯಲೆಂಬೆ ತಮ್ಮಭಿಮತಮಂ ॥೧೧॥
ತಪ್ಪೊದಗಿರಲೆನ್ನಿಂದದ-। ನೊಪ್ಪುತೆ ತಿದ್ದುವೆನು ಮರಳಿ ತಪ್ಪಾಗದವೋಲ್ ॥
ತಪ್ಪದೆ ನೆನೆದಪೆನೆನ್ನಯ । ತಪ್ಪುಗಳಂ ಬಿಡದೆ ತೋರಿದವರುಪಕೃತಿಯಂ ॥೧೨॥

ಸತ್ಕವಿಜನ ವಿಧೇಯ,

ಧಾರೇಶ್ವರ,
ಶಕೆ. ೧೮೪೫.

ವೆಂಕಪ್ಪ ಪರಮಯ್ಯ ಹೆಗ್ಗಡೆ, ಕಡೇಕೋಡಿ,
ಸಂಶೋಧಕ ಮತ್ತು ಪ್ರಕಾಶಕ.

(ಮೊದಲನೆಯ ಆವೃತ್ತಿ)

# ಹೃದಯ ಮರ್ಮ.

ಕರ್ಣಾಟಕಾಭಿಮಾನಿಗಳೇ! ದೇಶೋನ್ನತಿಗೆ ಭಾಷೋನ್ನತಿಯೇ ಸಾಧಾರವಷ್ಟೇ? ಭಾಷೋನ್ನತಿಗೆ ರಾಜಾಶ್ರಯವು ಅವಶ್ಯವಷ್ಟೇ? ಕನ್ನಡದಲ್ಲಿ ಜೈಮಿನಿಯಂಥ ಕಾವ್ಯವು ಅನ್ಯಾದೃಶ್ಯವೆಂದು ಹೆಸರಾಗಿದೆಯಷ್ಟೇ? ಅಂಥ ಉದ್ಗ್ರಂಥಗಳು ಕನ್ನಡದಲ್ಲಿ ಆಗಿಲ್ಲವೆನ್ನುವಹಾಗಿಲ್ಲ. ಆದರೆ ಕನ್ನಡಕ್ಕೆ ರಾಜಾಶ್ರಯವಿಲ್ಲದ್ದರಿಂದ ಅವು ಮುಂದೆ ಬರಲಿಲ್ಲ.

ಈ ಮೊದಲೇ ಕರ್ಕಿಯಲ್ಲಿ ಹೊರಡಲಣಿಯಾದ "ಪ್ರಾಚೀನ ಗ್ರಂಥ ಮಾಲೆಯು" ಸ್ಥಳಾಂತರಹೊಂದಿ "ಕರ್ಣಾಟಕ ಸುಕಾವ್ಯ ರತ್ನಮಾಲಾ" ಎಂಬ ಹೆಸರಿನಿಂದ ಅಂತೂ ಇಂತೂ ಕರ್ನಾಡಂಗಳದಲ್ಲಿ ಕಾಲಿಟ್ಟಿತು. ಮುಂದರಿಸಿ ರಕ್ಷಿಸುವುದು ಕನ್ನಡಿಗರನ್ನು ಅವಲಂಬಿಸಿದೆ. ಈ ಪ್ರಥಮ ಮಣಿಯಲ್ಲಿ ಮುದ್ರಿಸಿದ ಪರಶುರಾಮ ರಾಮಾಯಣವು ಪೂರ್ವದಲ್ಲಿ ಬೊಬ್ಬೂರ ರಂಗಪ್ಪನಿಂದ ವಿರಚಿತವಾದದ್ದು. ಇದು ಜೈಮಿನಿಗೆ ಸರಿಯಾದ ಉತ್ತಮ ಕಾವ್ಯವೆಂದೂ ಇದರಲ್ಲಿ ಬರವಣಿಗೆಯ ಸ್ಖಾಲಿತ್ಯಗಳು ಅಧಿಕವಾಗಿರುವವೆಂದೂ ಬೆಂಗಳೂರ ಕನ್ನಡ ಸಾಹಿತ್ಯಪರಿಷತ್ತಿನವರು ತಮ್ಮ ಸದಭಿಪ್ರಾಯ ವ್ಯಕ್ತಗೊಳಿಸಿದ್ದರು.

ಈ ಕಾವ್ಯವು ಹೊಸಕೆರೆ ಚಿದಂಬರಯ್ಯನವರಿಂದ ನಮ್ಮ ಕಡೆಗೆ ಬಂತು. ಇದರಲ್ಲಿ ವಿಪುಲವಾಗಿ ತುಂಬಿದ ಲೋಪಾಗಮಾದೇಶಾದಿ ದೋಷಗಳನ್ನು ಪರಿಷ್ಕರಿಸಿ ಪೂರಾ ಪುಸ್ತಕವನ್ನು ಒಮ್ಮೆಲೇ ಮುದ್ರಿಸಬೇಕೆಂದು ಯೋಚಿಸಿ ದ್ರವ್ಯಾಭಾವದಿಂದ "ಋಣಂ ಕೃತ್ವಾ ಘೃತಂ ಪಿಬೇತ್"ಎಂಬುಕ್ತಿಯಂತೆ ಘನವಂತರನೇಕರಲ್ಲಿ ಚಾತಕದಂತೆ ಬಾಯ್ಬಿಟ್ಟು ಋಣಗೆಯ್ದು ಗುಣಹೊಂದಲೆಳಸಿ ಬೇಡಿ ಕಾಡಿ ನೋಡಲು ಕಿಂಶುಕಕ್ಕೆರಗಿದ ಭ್ರಮರದಂತಾಯಿತು. ಆದರೆ ಎಡರಿಗಂಜಿಡದೆ ಹಿಡಿದ ಕಾರ್ಯವನ್ನು ಜೇಡದಂತೆಸಗುವದೇ ಕರ್ತವ್ಯವೆಂದು ಅಖಂಡ ಕಾವ್ಯವನ್ನು ತುಂಡುತುಂಡಾಗಿ ವಿಂಗಡಿಸಿ ಖಂಡಕಾವ್ಯವನ್ನೆಸಗಿ ಮುದ್ರಿಸಲು ನಿರ್ಧರಿಸಿ ಇದನ್ನು ಪ್ರಕಾಶಗೊಳಿಸಾಯಿತು. ಉದಾರರಾದ ವಾಚಕರು ಸ್ವಪರ ಹಸ್ತಗಳಿಂದ ಸಹಾಯ ಮಾಡಿದರೆ ಅಚ್ಚಿನಲ್ಲಿದ್ದ ಇದರ ದ್ವಿತೀಯ ಮಣಿಯು ಶೀಘ್ರದಲ್ಲಿಯೇ ನಿಮ್ಮ ಕೈಸೇರುವುದು. ಇಲ್ಲವಾದರೆ.........ಮುಂದೆ ಹೇಳಲಾರೆ. ಇಂಥ ಅಮೌಲ್ಯವಾದ ಇನ್ನೂ ಮುದ್ರಣವನ್ನೇ ಕಾಣದ ತಾಡವಾಲೆಯಲ್ಲಿದ್ದ ಅನೇಕ ಪದ್ಯಕಾವ್ಯಗಳು ಸಂಗ್ರಹಿಸಲ್ಪಟ್ಟಿವೆ. ಇದಕ್ಕೆ ಸಹಾಯವು ದೊರೆತರೆ ಮುಂದಿನವೆಲ್ಲಾ ಇದರ ಬೆನ್ನು ಹಿಡಿಯುವವು. ಇಲ್ಲವಾದರೆ ಹಿಂದೇ.........

ದೇಶಭಾಷಾಭಿಮಾನಿಗಳೇ, ಪತ್ರಿಕಾಕರ್ತರೇ, ಪಂಡಿತವರ್ಯರೇ, ಈ ಮನೋಹರವಾದ ಕಾವ್ಯದ ಬಗ್ಗೆ ನಿಮ್ಮ ನಿಮ್ಮ ಸದಭಿಪ್ರಾಯವನ್ನು ವ್ಯಕ್ತಗೊಳಿಸಿ ಗ್ರಂಥವು ಚಿರಕಾಲ ವಾಚಕರ ದೃಕ್ಪಥದಲ್ಲಿ ಸಂಚರಿಸುವಂತೆ ಮಾಡಬೇಕೆಂದು ಸವಿನಯ ಪ್ರಾರ್ಥನೆ. ಮತ್ತು ಇದನ್ನು ನಾವೇ ವರ್ಣಿಸುವದಕ್ಕಿಂತ ನೀವೇ

ಕಾವ್ಯವನ್ನು ಚನ್ನಾಗಿ ಅಗಿದುನೋಡಿದರೆ ರುಚಿಯು ಸಹಜವಾಗಿ ತಿಳಿಯುವಂತಿರುವದರಿಂದ ಈ ಅಲ್ಪವಿನಂತಿಗೆ ವಿಶ್ರಾಂತಿಯನ್ನಿತ್ತೆವು.

ಅಧ್ಯಕ್ಷ:–"ಕರ್ಣಾಟಕ ಸುಕಾವ್ಯರತ್ನಮಾಲಾ", ಪೋ. ಧಾರೇಶ್ವರ,(ಕುಮಟಾ.)

---

# ಗ್ರಂಥ ಕಥಾಭಿಪ್ರಾಯ.

ಶ್ರೀಯುತ ವೆಂಕಪ್ಪಾ ಪರಮಯ್ಯಾ ಹೆಗಡೆ ಕಡೇಕೋಡಿಯವರು ಕರ್ಣಾಟಕ ಸುಕಾವ್ಯ ರತ್ನಮಾಲಾ ಪ್ರಥಮ ಮಣಿಯಾಗಿ ಮುದ್ರಿಸಿ ಕಳಿಸಿದ ಪರಶುರಾಮ ರಾಮಾಯಣವನ್ನು ಅತ್ಯಾನಂದದಿಂದ ಸ್ವೀಕರಿಸಿದೆನು. ಇದು ಕ್ಷುದ್ರ ಗ್ರಂಥವಾಗಿರದೆ ಜೈಮಿನಿಯೆದುರಿಗೆ ಸಡ್ಡುಹೊಡೆದು ಸಜ್ಜಾಗಿ ನಿಲ್ಲುವ ಮಹಾಕಾವ್ಯವಾಗಿದ್ದು ಕಾರಾಗೃಹದ ಸಂಧಿಯಲ್ಲಿ ಬಂದಿಯಾಗಿ ಅಡ್ಡಪಟ್ಟಿಯ ಮೇಲೆ ಕಸಕಡ್ಡಿಗಳೊಡನೆ ಹೊರಳಾಡುತ್ತೆ ಹುಳುಹುಪ್ಪಡಿಗಳ ಕಡಿತದಿಂದ ಸರ್ವಾಂಗಛಿದ್ರವಾಗಿ ಮೇಲುಸುರಿಗಿಕ್ಕಿ ತನ್ನನ್ನು ಬೆಳಕಿಗೆ ತಂದು ಕಾವ್ಯಾಭಿಮಾನಿಗಳ ವಿಚಾರಕ್ಕೆಡೆಯಾಗುವಂತೆಸಗಿ ವಿಶಾಲವಾದ ವಾತಾವರಣದ ಸುಖಾನಂದವೀಯಬಲ್ಲ ದಯೆಯುಳ್ಳ ಭಾಷಾಭಿಮಾನಿಗಳ ಆಶ್ರಯಸಿಗದೇ ಇತ್ತು. ಈಗ ಪ್ರಕಾಶನಾದಾನಂದವು ನನ್ನಂತೇ ಎಲ್ಲಾ ಕನ್ನಡಿಗರಿಗೂ ಆಗುವದು ಸಹಜವು. ಈ ಗ್ರಂಥಕರ್ತರಾದ ಬೊಬ್ಬೂರ ರಂಗಪ್ಪನವರ ವಂಶಜರು ನನ್ನ ಸಮೀಪ ಬಂಧುಗಳಾದುದರಿಂದ ನನ್ನ ಬಾಲ್ಯಾವಸ್ಥೆಯನ್ನು ಅವರ ಮನೆಯಲ್ಲಿಯೇ ಕಳೆದುದರಿಂದ ನಾನು ಆಗಲೇ ಇದನ್ನೋದಿ ನೋಡಿದ್ದೆನು. ದೀಪದಡಿಯಲ್ಲಿ ಕತ್ತಲೆಯಾಗುವಂತೆ ಇಂಥಾದ್ದೊಂದು ಉದ್ಗ್ರಂಥವನ್ನು ಬರೆಯುವ ಯೋಗ್ಯತೆಯನ್ನು ವಿಧಿಯು ನನ್ನ ಹಣೆಯಲ್ಲಿ ಬರೆಯಲಿಲ್ಲಾದರೂ ವರಕವಿಗಳ ಸಂಬಂಧಿಕರಲ್ಲಿ ಜನ್ಮಕೊಟ್ಟಿದ್ದೇ ಪರಮಾನುಗ್ರಹವೆಂದು ಭಾವಿಸುವೆನು. ಇಂಥ ಅಭಿಮಾನಾಸ್ಪದವಾದ ಸತ್ಕಾವ್ಯವನ್ನು ಪ್ರಕಾಶಗೊಳಿಸಲು ಕವಿಗಳ ಸಂಬಂಧಿಕರೆಂದು ಹೆಮ್ಮೆಯಿಂದ ಎದೆತಟ್ಟಿ ಜಂಭಬಡಿಯುತ್ತ ಮೆರೆಯುವ ನಾವು ಹಿಂದೆಮುಂದೆ ನೋಡುತ್ತಿರುವಾಗ ನಮ್ಮ ಮಿತ್ರರಾದ ಕಡೇಕೋಡಿಯವರು ಅದಕ್ಕೆ ಎನೆಗೊಟ್ಟು ಪ್ರಕಾಶಕರಾಗಿ ನಿಂತಿದ್ದು ನಿಜವಾಗಿ ಅಭಿನಂದನೀಯವಾಗಿದೆ.

ಈಚೆಗೆ ನಮ್ಮ ಸಮೀಪ ಬಂಧುಗಳಲ್ಲೊಬ್ಬರಾದ ಶ್ರೀ ಬಿ. ನರಸಿಂಹಯ್ಯನವರು ಹಿರಿಯೂರ ಹೆಣ್ಣುಮಕ್ಕಳ ಶಾಲಾಧ್ಯಾಪಕರಾಗಿದ್ದಾಗ ಈ ಗ್ರಂಥವನ್ನು ನೋಡಿ ಶುದ್ಧಪ್ರತಿಯನ್ನು ಬೇರೆ ಬೇರೆ ಕಡೆಗೆ ಅರಸಿ ಸಿಗದೇ ದೊರೆತದ್ದರ ಮೇಲಿಂದ ಒಂದು ಪ್ರತಿಯನ್ನು ಬರೆದು ಪೂರ್ಣಮಾಡಿ "ಈ ಕನ್ಯೆಗೆ ಕಲ್ಯಾಣ ಮಾಡುವ ಸದ್ಗುರುವನ್ನು ಹುಡುಕಿ ಕೊಡು" ಎಂದು ನನ್ನ ಕಡೆಗೆ ಕೊಟ್ಟರು. ಈ ಕಾವ್ಯಸಂಗ್ರಹಕ್ಕಾಗಿ ಅವರು ಪಟ್ಟ ಶ್ರಮವು ಅತ್ಯಂತ ಪ್ರಶಂಸನೀಯವಾದುದರಿಂ

ದ ಮುನ್ನುಡಿ ಮೊದಲಾದವುಗಳಲ್ಲಿ ಸೇರಲಿಕ್ಕೆ ಅವರೇ ಯೋಗ್ಯರಲ್ಲದೆ ನಾನು ಅರ್ಹನಲ್ಲ. ಯೋಗ್ಯರಾದ ಗುರುಶಿಷ್ಯರನ್ನು ಗಂಟಿಕ್ಕುವದರಲ್ಲಿ ಮಹತ್ವವಿರುವ ಪ್ರಯುಕ್ತ ಆ ಶ್ಲಾಘನೆಯು ಮಾತ್ರ ನನಗೆ ಸಲ್ಲಬಹುದು. ಬಳಿಕ ನಾನು ಗುರುಕುಲಾನ್ವೇಷಣನಾಗಿ ಬೆಂಗಳೂರ ಕನ್ನಡ ಸಾಹಿತ್ಯ ಪರಿಷತ್ತಿನವರ ಮುಂದೆ ಕನ್ಯೆಯನ್ನು ತೋರಿಸಿ "ಕನ್ಯೆ ಸಲಕ್ಷಣವಾಗಿದೆ. ಸಾಧನ (ಹಣ) ಸಂಗ್ರಹಪಿಲ್ಲ" ವೆನಿಸಿಕೊಂಡು ಜೋಲುಮೋರೆ ಹಾಕಿಕೊಂಡು ಬಂದೆನು. ಕಣ್ಣಿಟ್ಟವರು ಯಾರೂ ಕನ್ಯೆಯ ಲಕ್ಷಣಕ್ಕೆ ಭಿನ್ನಾಭಿಪ್ರಾಯಪಡುವಂತೇ ಇಲ್ಲ. ಇಂಥಾ ಕನ್ಯೆಯು ಲಭಿಸಬೇಕಾದರೆ ಪೂರ್ವಪುಣ್ಯವು ಹೆಚ್ಚಾಗಿಬೇಕೆಂದು ಎದೆತಟ್ಟಿ ಹೇಳಬಹುದು. ಆದರೆ ಸಾಧನ ಸಂಗ್ರಹಕ್ಕೇನು ಮಾಡುವದು? "ಕನ್ಯಾಪಿತೃತ್ವಂ ಖಲು ನಾಮ ಕಷ್ಟಂ" ಎಂಬುಕ್ತಿಯು ಸುಳ್ಳಾದೀತೆ? ಅದರಲ್ಲೂ ಕನ್ಯೆಯು ಬಹುಗಾಲದ ಹಿಂದೆಯೇ ಜನಕನನ್ನು ಕಳಕೊಂಡಿದ್ದಾಳೆ. ಮುಂದೇನು ಗತಿಯೆಂದು ಚಿಂತಿಸುವಷ್ಟರಲ್ಲಿ ಶ್ರೀ॥ ಕಡೇಕೋಡಿಯವರು ತಮಗಿರುವ ಭಾಷಾವಾತ್ಸಲ್ಯದಿಂದಲೂ ಪದ್ಯಕಾವ್ಯಾಭಿಮಾನದಿಂದಲೂ ಕನ್ನಡ ಪ್ರಾಚೀನ ಗ್ರಂಥಗಳಿಗೆ ಶುಭಾಗಮನ ಬಯಸಿದ್ದು ನೆನಪಾಗಿ ಪತ್ರಬರೆದೆನು. ಅವರು ಕನ್ಯೆಯನ್ನೂ ಸಾಧನ ಸಂಗ್ರಹವನ್ನೂ ನೋಡದೇ ಪಾಂಡವ್ಯ ಮತವಿಡಿದು ಮಂಗಲ (ಪತ್ರಸ್ವೀಕಾರ) ಪತ್ರವನ್ನೇ ಬರೆದರು. ಕೂಡಲೇ ನಾನು ಕನ್ಯೆಯನ್ನು ಅದರ ಮೂಲಸ್ವರೂಪ ಸ್ಥಿತಿಯಲ್ಲಿಯೇ ಅವರೆದುರಿಗೆ ಅಟ್ಟಿದೆನು. ನಾನು ಕನ್ಯೆಯನ್ನು ಕಳಿಸುವಾಗ ಒಂದೆರಡು ದಿನವಾದರೂ ನೀರೆರೆದು ಅದಷ್ಟು ಉಡಿಗೆ ತೊಡಿಗೆಗಳನ್ನು ತೊಡಿಸಿದ್ದರೆ ಚನ್ನಾಗಿತ್ತೆಂದು ಈಗ ಮನದಲ್ಲಿ ಕೊರೆಯುತ್ತದೆ. "ವಿಪ್ರಾಃ ಪಶ್ಚಿಮಬುದ್ಧಯಃ" ಎಂಬ ಮಾತು ಸುಳ್ಳಾಗಬಾರದೆಂದೇ ಆಗ ವಿಧಾತನು ನನಗೆ ಉಪೇಕ್ಷೆ ಬುದ್ಧಿಯಿತ್ತಿರಬಹುದು. ತಂದೆಯನ್ನು ಮೊದಲೇ ಕಳಕೊಂಡು ದಿಕ್ಕಿಲ್ಲದೇ ದೈವಯೋಗದಿಂದ ಮಾತ್ರ ಬದುಕಿದ್ದ ಈ ಹುಡುಗಿಯ ತಲೆಗೆದರಿ ಅವಯವಗಳು ಅಸ್ತವ್ಯಸ್ತವಾಗಿ ಮೈಯೆಲ್ಲಾ ಮಸಕಾಗಿ ಕುರೂಪಿಯಾಗಿ ಯಾರೂ ಮಾತಾಡಿಸದಂತಾಗಿತ್ತು. ಇಂಥಾ ಅನಾಥಳಾದ ಬಡ ಹುಡುಗಿಯನ್ನು ಶ್ರೀ॥ ಕಡೇಕೋಡಿಯವರು ಆದರದಿಂದ ದತ್ತಪುತ್ರಿಯಾಗಿ ಸ್ವೀಕರಿಸಿ ನೀರೆರೆದು ಕೊಳೆತೊಳೆದು ಚದರಿದವಯವಗಳನ್ನು ತಿದ್ದಿ ಸರಿಪಡಿಸಿ ಉಚಿತಾಹಾರವಿತ್ತು ಅಂಗೋಪಾಂಗಗಳನ್ನು ಪರಿಪುಷ್ಟಿಗೊಳಿಸಿ ಬೆಳಿಸಿ ತಮ್ಮಿಂದಾದಷ್ಟು ಯೋಗ್ಯವಾದ ವಸ್ತ್ರಾಭರಣಗಳಿಂದ ಅಲಂಕರಿಸಿ ಮನೋಹರವಾದ ನಾರೀಮಣಿಯನ್ನೆಸಗಿ ಶೃಂಗಾರಾದಿ ಚೇಷ್ಟೆಗಳಿಂದ ರಸಿಕಾದಿ ಕನ್ನಡಿಗರ ಮನವೊಲಿಸಿ ಮರಿಸಲು ಈಗ ರಂಗಸ್ಥಳದಲ್ಲಿರಿಸಿದ್ದಾರೆ. ಅತಿ ಸೂಕ್ಷ್ಮದರ್ಶಕ ಯಂತ್ರದಿಂದ ನೋಡಿದರೆ ಹೊಸತೋ ಹಳೇದೋ ಎಂಬಿತ್ಯಾದಿ ಕೆಲ ನ್ಯೂನತೆಗಳು ಕಾಣಬಹುದಾದರೂ, ಅವೂ ಕಾಲಾಂತರದಲ್ಲಿ ಅದೃಶ್ಯವಾಗತಕ್ಕವುಗಳಾಗಿರುವವು. ಬಹಳವಾಗಿ ಸೊರಗಿದ್ದ ಈ ಕನ್ಯೆಯನ್ನು ಇಷ್ಟು ಪೂರ್ಣ

ತಿಗೆ ತರಬೇಕಾದರೆ ಶ್ರೀ॥ ಕಡೇಕೋಡಿಯವರಿಗೆ ಹೊಸ ಕಾವ್ಯವನ್ನು ರಚಿಸಿದಷ್ಟಕ್ಕಿಂತ ಹೆಚ್ಚು ಶ್ರಮವುಂಟಾಗದೇ ಇರಲಾರದೆಂಬುದು ಖಂಡಿತವಾದ ಮಾತು. ಅವರ ಪ್ರಯತ್ನಕ್ಕೆ ಪ್ರತಿಫಲವೀಯುವುದು ಭಾಷಾಭಿಮಾನ ದೇವತೆಗೂ, ವಾಚಕರಿಗೂ ಸಾಧಿಸುವ ಮಾತೇ ಹೊರತು ನನ್ನಂಥವನಿಗೆ ದಕ್ಕುವ ಮಾತಲ್ಲ. ಶ್ರೀ॥ ಕಡೇಕೋಡಿಯವರು ಈಗ ಆರೇ ಅಧ್ಯಾಯಗಳನ್ನು ಮುದ್ರಿಸಿರುವರು. ಈ ಕಾವ್ಯದಲ್ಲಿ ೪೩ ಅಧ್ಯಾಯಗಳಿರುವವು. ಒಮ್ಮಿಗೇ ಅದನ್ನು ಪೂರಾ ಹೊರಗೆ ತರುವದು ಸಾಮಾನ್ಯರಿಗೆ ಸಾಧ್ಯವಲ್ಲ. ವಾಚಕರು ದಯವಿಟ್ಟು ಈ ಪ್ರಥಮ ಮಣಿಯನ್ನು ಕೈನೀಡಿ ತೆಗೆದುಕೊಂಡು ತಮ್ಮ ಕಂಠಿಗೆ ಹಾಕಿಕೊಂಡರೆ ಮುಂದಿನ ಮಣಿಗಳ ಸಿದ್ಧತೆಗೆ ಒತ್ತಾಸೆಗೊಟ್ಟಂತಾಗುವದು. ಇಂಥ ದೊಡ್ಡ ದೊಡ್ಡ ಗ್ರಂಥಗಳು ಹೀಗೇ ಮುಂದೆ ಬರಬೇಕೇ ಹೊರತು ಸಾಮಾನ್ಯವಾಗಿ ಬೇರೆ ಉಪಾಯವಿಲ್ಲ. ಈಗ ದೇಶಾಭಿಮಾನ, ಭಾಷಾಭಿಮಾನ, ಮೊದಲಾದ ಮಾತುಗಳು ಹಿಂದುಸ್ಥಾನದ ವಾತಾವರಣದಲ್ಲಿ ಎಲ್ಲೆಲ್ಲಿಯೂ ತುಂಬಿವೆಯಷ್ಟೇ! ಈಗ ಕನ್ನಡಿಗರೂ ಅದನ್ನು ಕಾರ್ಯರೂಪದಲ್ಲಿ ತೋರಿಸಲಿಕ್ಕೆ ಇದೂ ಒಂದು ಸುಪ್ರಸಂಗವಾಗಿದೆ. ಇಂಥಾ ಉದ್ಗ್ರಂಥಗಳು ಶತಮಾನಕ್ಕೊಂದಾದರೂ ಹುಟ್ಟುವವೋ ಇಲ್ಲವೋ ಹೇಳಲಿಕ್ಕೆ ಬರುವದಿಲ್ಲ. ಇಂಥಾ ಅಪೂರ್ವ ಯೋಗಗಳನ್ನು ಕಡೆಗಣ್ಣಿಂದ ನೋಡಿದರೆ ಎಣಿಕೆ ಬಂದಾಗ ಕಣ್ಣುಮುಚ್ಚಿದಂತೇ ಸರಿ. ಆದ್ದರಿಂದ ಪ್ರತಿಯೊಬ್ಬ ಕನ್ನಡಿಗನು ಈ ಗ್ರಂಥಕ್ಕೆ ಭಾಷಾಭಿಮಾನದಿಂದಾಗಲೀ, ದೇಶಾಭಿಮಾನದಿಂದಾಗಲೀ, ಸ್ವಾಭಿಮಾನದಿಂದಾಗಲೀ, ಸ್ವಾರ್ಥಕ್ಕಾಗಲೀ, ಪರಾರ್ಥಕ್ಕಾಗಲೀ, ಆಶ್ರಯವನ್ನು ಕೊಡಬೇಕೆಂದು ಬೇಡುತ್ತೇನೆ. ಈಗ ಆಶ್ರಯವೀಯಲು ಹಿಂದೆ ಮುಂದೆ ನೋಡಿದರೆ ಮುಂದೆ ಇಂಥಾ ಸುಳಿಗಳೊಡೆಯುವ ಸಂಭವವೇ ಕಡಿಮೆಯಾದೀತು. ಆದ್ದರಿಂದ ಮುಂದಿನವರ ಹಿತಕ್ಕಾಗಿ ಆದರೂ ಜನರೆಲ್ಲರೂ ಉದಾರಾಶ್ರಯವೀಯುವರೆಂದು ನಂಬುತ್ತೇನೆ. ಗ್ರಂಥಕರ್ತರ ವಿಷಯವಾಗಿ ಇಲ್ಲಿ ನಾನು ಏನೂ ಹೇಳಲಿಲ್ಲ. ಗ್ರಂಥವು ಪೂರ್ಣವಾಗುವದರೊಳಗೆ ಒಮ್ಮೆ ನಾನು ಈ ಉದ್ದೇಶದಿಂದ ನನ್ನ ಬಾಲಕ್ರೀಡಾ ಭೂಮಿಯಾದ ಹಿರಿಯೂರಿನ ನೋಟವನ್ನು ಕಣ್ಣೊಳಗೆ ತುಂಬಿಕೊಂಡು ಅಲ್ಲಿರುವ ವೃದ್ಧರೊಡನೆ ವಿಚಾರ ಮಾಡಿ ನನಗೆ ತಿಳಿದಷ್ಟು ಸಂಗತಿಗಳನ್ನು ಬರೆದು ಪೂರ್ಣ ಪುಸ್ತಕಕ್ಕೆ ಸೇರಿಸಲಿಕ್ಕೆ ಕೊಡುವೆನು.

ತಮ್ಮ ವಿಧೇಯ,

ಹೊಸಕೆರೆ ಚಿದಂಬರಯ್ಯ,

(ಕರ್ನಾಟಕ ಕವಿರತ್ನ)



# ದ್ವಿತೀಯಾವೃತ್ತಿಯ ಮುನ್ನುಡಿ.





ರ್ನಾಟಕ ವಾಙ್ಮಯದಲ್ಲಿ ಪದ್ಯಕಾವ್ಯಗಳು ವಿಪುಲವಾಗಿದ್ದು ಅವು ಎಲ್ಲ ಯೋಗ್ಯತೆಯ ಜನರನ್ನು ಆನಂದಪಡಿಸುವಂತಿರುವವು. ಅತಿ ಪ್ರಾಚೀನ ಕಾಲದ ಪದ್ಯಬಂಧದ ಬಿಗಿಯಾದ ಸರಣಿಯು ಬರಬರುತ್ತಾ ಸುಲಭವಾಗುತ್ತಾ ಬಂದು ಷಟ್ಪದಿಯ ಯುಗದಲ್ಲಿ ಅದು ವಿಶೇಷವಾಗಿ ಪಂಡಿತ ಪಾಮರ ಮನೋರಂಜಕವಾಯಿತು. ಷಟ್ಪದೀಕಾವ್ಯಕರ್ತರಲ್ಲಿ ಲಕ್ಷ್ಮೀಶನೊಬ್ಬನೇ ಅಗ್ರಗಣ್ಯತೆಯನ್ನು ದೊರಕಿಸಿರುವನಾದರೂ ಅವನಂತೇ ಇನ್ನೂ ಅನೇಕ ಶಾರದಾ ಭಕ್ತರು ಕನ್ನಡದಲ್ಲಿ ವಾಗ್ದೇವಿಯ ಸೇವೆಯನ್ನು ಮನಮುಟ್ಟಿ ಮಾಡಿರುವರು. ಕಾವ್ಯಗುಣಗಳಲ್ಲಿಯೂ ಬಂಧದಲ್ಲಿಯೂ ಜೈಮಿನೀಭಾರತಕ್ಕೆ ಸರಿಸಮಾನವಾದ ಗ್ರಂಥಗಳು ಹುಟ್ಟಲೇ ಇಲ್ಲವೆಂದು ಹೇಳಲಾಗುವದಿಲ್ಲ. ಪರಶುರಾಮ ರಾಮಾಯಣವೂ, ತುರಂಗ ಭಾರತವೂ, ಜೈಮಿನೀ ಭಾರತವೂ ಒಂದೇ ಪರಡಿಯಲ್ಲಿಟ್ಟು ತೂಗಲು ತಕ್ಕದ್ದಾಗಿವೆ. ತುರಂಗ ಭಾರತವು ಆಕಾರದಿಂದ ಎಲ್ಲಕ್ಕೂ ದೊಡ್ಡದಿದ್ದು ಬರಹಗಾರರ ನಿದ್ರಾಲಸ್ಯಾದಿಗಳಿಂದ ಒದಗಿದ ಹಸ್ತದೋಷಗಳನ್ನೂ ಹಲವೆಡೆಯಲ್ಲಿ ಸ್ಖಲಿತವಾಗಿರುವ ಅಂಶಗಳನ್ನೂ ಪ್ರಕಾಶಕರು ಆರಿಸಿ ತೆಗೆದು ಚನ್ನಾಗಿ ಸರಿಪಡಿಸದೆ ಇದ್ದುದರಿಂದ ಜನತೆಯಲ್ಲಿ ತುಸು ಹಿಂದಡಿಯನ್ನು ಇಟ್ಟಿರುವುದು. ಅದರಂತೆ ಪರಶುರಾಮ ರಾಮಾಯಣದ ಅವಸ್ಥೆಯಾಗಿದ್ದಿತು.

ಲೇಖಕರ ಅನಭಿಜ್ಞತೆಯಿಂದಲೂ ಅನಾದರದ ಮೂಲಕವಾಗಿಯೂ ಗ್ರಂಥಗಳಲ್ಲಿ ಹಲವು ದೋಷಗಳು ಸಹಜವಾಗಿ ಸೇರುವುವು. ಇನ್ನು ಪ್ರಾಚೀನ ಗ್ರಂಥಗಳಿಗೆ ಆಶ್ರಯಸ್ಥಾನವಾದ ಮನೆಯ ಮೂಲೆಯೊಳಗಿನ ಹಲಿಗೆಗಳಲ್ಲಿ ಸೇರಿಕೊಂಡ ಹುಳಹುಪ್ಪಡಿ ಹಾಗೂ ಪಿಪೀಲಿಕಾದಿಗಳ ಭಕ್ಷಣದಿಂದ ಸ್ಖಲಿತವಾದ ಅಂಶಗಳೂ ವಿಶೇಷವಾಗಿ ಇರುವುವು. ಈ ಎಲ್ಲಾ ಬಗೆಯ ದೋಷಗಳನ್ನು ಆರಿಸಿ ತೆಗೆದು ಗ್ರಂಥವು ದೋಷರಹಿತವಾಗುವಂತೆಯೂ ಸಮಗ್ರವಾಗುವಂತೆಯೂ ಮಾಡುವದು ಪುರಾತನ ಗ್ರಂಥ ಪ್ರಕಟನೆಯ ಕಾರ್ಯದ ಮೊಟ್ಟಮೊದಲನೆಯ ಕೆಲಸವು. ಈ ಭಾಗವು ಬಹಳ ಕಷ್ಟಸಾಧ್ಯವಾದುದಾದರೂ ಪ್ರತಿಭಾಸಂಪನ್ನರಾದವರು ಮನಮುಟ್ಟಿ ಪ್ರಯತ್ನಿಸಿದರೆ ಒಮ್ಮೆ ಇದನ್ನು ಕೊನೆಗಾಣಸಬಹುದು. ಆದರೆ ಗ್ರಂಥವನ್ನು ಮುದ್ರಿಸಿ ಪ್ರಕಟಿಸುವ ೨ ನೆಯ ಕಾರ್ಯವು ನಮಗೇಕೋ ಎತ್ತಲಾರದ ಹೊರೆಯೆಂದು ತೋರುತ್ತದೆ.

ಹೊತ್ತು ಹೋಗದ ಸಮಯದಲ್ಲಿ ಕೂತು ೪ ಪುಟಗಳನ್ನು ತಿರುವಿಹಾಕಲು ತಕ್ಕವಾದ ಕತೆ ಕಾದಂಬರಿಗಳನ್ನು ಓದುವವರೂ ಅಲ್ಪ ಸ್ವಲ್ಪ ಹಣ ವೆಚ್ಚ ಮಾಡಿ ಅವನ್ನು ಕೊಂಡುಕೊಳ್ಳುವವರೂ ಅಲ್ಲಲ್ಲಿ ಹಲ ಕೆಲವರು ದೊರೆಯಬಹುದಾದರೂ ಇದ್ದುದರಲ್ಲಿಯೇ ತುಸು ಹೆಚ್ಚು ಹೊತ್ತನ್ನು ಉಳಿಸಿಕೊಂಡು ಸ್ವಲ್ಪ ಮಾನಸಿಕ ಶ್ರಮವನ್ನು ಸಹಿಸಿ ಕೊಂಚ ವಿಚಾರದಿಂದ ಓದಬೇಕಾಗಿರುವ ಪದ್ಯ ಕಾವ್ಯಗಳನ್ನು ಓದಬೇಕೆಂಬ ಲಾಲಸೆಯುಳ್ಳವರನ್ನು ಹತ್ತೆಂಟು ಹಳ್ಳಿಗೊಬ್ಬರನ್ನಾದರೂ ಕಾಣುವದು ಈಗೀಗ ದುರ್ಲಭವಾಗಿದೆ. ಶಹರಗಳಲ್ಲಂತೂ ಇಂಥ ಕಾವ್ಯ ಪತ್ರಕಗಳು ತಿಂಡಿಯನ್ನು ಕಟ್ಟಿಕೊಟ್ಟು ತಿಂದಾದ ಬಳಿಕ ಚಹದ ಒಲೆಯನ್ನು ಹೊತ್ತಿಸುವುದಕ್ಕೇ ಸರಿ. ಪದ್ಯವೆಂದೊಡನೆಯೇ ಮೂಗುಮುರಿಯುದ ಕನ್ನಡಿಗರನ್ನು ಈ ಕಾಲದಲ್ಲಿ ಕಾಣದವರು ಇಲ್ಲವೆಂದರೆ ತಪ್ಪಾಗಲಾರದು.

ಮೊದಲೇ ಬಡತನ ಮೇಲೆ ದುರ್ಭಿಕ್ಷವೆಂಬಂತೆ ಗದ್ಯಗ್ರಂಥ ಪ್ರಕಾಶಕರ ಗತಿಯಾಗಿದೆ. ಅಂದಬಳಿಕ ಪದ್ಯಕಾವ್ಯ ಪ್ರಕಟನೆಯನ್ನೆಸಗುವವರ ಪಾಡೇನೆಂಬದನ್ನು ವಾಚಕರೇ ಊಹಿಸಲಿ. ಕರ್ನಾಟಕದ ಮಿಕ್ಕ ಭಾಗಗಳ ಅನುಭವವು ನಮಗೆ ವಿಶೇಷವಾಗಿಇರದೆ ಇದ್ದರೂ ಉತ್ತರ ಕನ್ನಡ ಜಿಲ್ಲೆಯ ಹಳ್ಳಿಗಳ ಪರಿಸ್ಥಿತಿಯ ಕೆಲವು ಮಾತುಗಳನ್ನು ಇಲ್ಲಿ ಹೇಳದಿರಲಾರೆವು. ನಮಗೆ ತಿಳಿಯುವಂತಿರುವಾಗಲೇ ಹಳ್ಳಿ ಹಳ್ಳಿಯಲ್ಲಿ ನಡಿಯುತ್ತಿದ್ದ ದೇವಾಲಯದೊಳಗಿನ ಶ್ರಾವಣ ಮಾಸದ ಪುರಾಣಪದ್ಧತಿಯು ಈಗ ಅದೃಶ್ಯವಾಗಹತ್ತಿದೆ. ಮನೆಮನೆಗಳಲ್ಲಿ ಸಾಯಂಕಾಲದಲ್ಲಿ ನಾಲ್ಕುಜನರು ಸೇರಿ ರಾಮಾಯಣ ಭಾರತ ಭಾಗವತಾದಿ ಗ್ರಂಥಗಳನ್ನು ಓದಿಕೇಳುವ ಕ್ರಮವು ಲೋಪವಾಗುತ್ತಾ ಬಂದಿದೆ. ಈಗ ತಾಡವಾಲೆಗಳಲ್ಲಿ ಬರೆಯುವವರಂತೂ ಇಲ್ಲವೆಂದರೆ ಅಡ್ಡಿಯಿಲ್ಲ. ಬರೆದಿಟ್ಟ ತಾಡವಾಲೆಯ ಗ್ರಂಥಗಳನ್ನು ಓದುವವರು ಸಹಾ ಅದೃಶ್ಯವಾಗುತ್ತ ಬಂದಿರುವರು.

ಹಣಕಾಸುಗಳಿಗಿಂತಲೂ ಹೆಚ್ಚುಬೆಲೆಬಾಳುವವೆಂದು ತಿಳಿಯಲ್ಪಡುತ್ತಿದ್ದ ಹಿಂದಿನ ಕಾಲದಲ್ಲಿ ಮನೆಯೊಳಗಿನ ಭದ್ರವಾದ ಭಾಗದಲ್ಲಿ ಅಡ್ಡಪಟ್ಟಿಗಳ ಮೇಲೆ ಇಡುತ್ತಿದ್ದ ತಾಡವಾಲೆಯ ಪುಸ್ತಕಗಳು ಈಗ ಮಹಾನವಮಿಯ ಶಾರದಾ ಪೂಜೆಯ ಕಾಲಕ್ಕಷ್ಟೇ ಹೊರಗೆ ಬಂದು ಪುನಃ ಕತ್ತಲೆಯ ಕೋಣೆಯಲ್ಲಿ ಸೇರಿ ಕೂಡ್ರುವ ಹೊತ್ತು ಬಂದಿದೆ. “ಇವೆಂಥ ಹಳೆಯ ಹರಕುಹೊತ್ತಿಗೆಗಳು! ಇವನ್ನಾರು ಓದಬೇಕು.” ಎಂಬ ಮಾತುಗಳು ಹೊರಡಹತ್ತಿವೆ. ಅಂದಬಳಿಕ ಮುಂದೆ ಅವನ್ನೆಲ್ಲಾ ಕಸದಗುಂಪಿಗೆ ಎಸೆದುಬಿಡುವ ಕಾಲವು ಎಲ್ಲಿ ಬರುವದೋ ಎಂದು ನಮಗೆ ಭೀತಿಯುಂಟಾಗಿದೆ. “ಕರ್ನಾಟಕದ ವಾಙ್ಮಯದ ಪ್ರಾಚೀನ ವಿಭಾಗದ ಬಹುದೊಡ್ಡ

ಅಂಶವು ಲೋಪವಾಗಿ ಹೋಗಿದೆ" ಎಂದು ದುಃಖ ಪ್ರದರ್ಶನ ಮಾಡುವ ಪಂಡಿತ ಪ್ರವರರು ಈ ಕಡೆಗೆ ಬೇಗನೇ ಲಕ್ಷ್ಯಪೂರೈಸದೇ ಇದ್ದರೆ ಕನ್ನಡ ತಾಯ್ನುಡಿಗೆ ದೊಡ್ಡ ಆಘಾತವುಂಟಾಗುವುವದರಲ್ಲಿ. ಸಂಶಯವಿಲ್ಲ; ನಮ್ಮಲ್ಲಿಯ ಹಳ್ಳಿಹಳ್ಳಿಯ ಮನೆಮನೆಗಳಲ್ಲಿ ತಾಡವಾಲೆಯ ಗ್ರಂಥ ಸಂಗ್ರಹವಿರುವದು. ಅವೆಲ್ಲಾ ಬಹುತರ ಷಟ್ಪದೀ ಯುಗದೊಳಗಿನ ಗ್ರಂಥಗಳು. ಕುಮಾರ ವ್ಯಾಸನ ಭಾರತದ ದಶಪರ್ವ ಗಳನ್ನಷ್ಟೇ ಪ್ರಕಟಿಸಿ ಮಿಕ್ಕಪರ್ವಗಳನ್ನು ಆತನು ಬರೆದೇ ಇಲ್ಲವೆಂದು ಹೇಳುವ ಪಂಡಿತ ಪ್ರವರರು ಒಮ್ಮೆ ನಮ್ಮ ಹಳ್ಳಿಗಳಲ್ಲಿ ಸಂಚರಿಸಿದ್ದರೆ ಒಳ್ಳೇದಾಗುತ್ತಿತು. ಈಗ ಮೈಸೂರ ಸರಕಾರದವರು ಪ್ರಕಟಿಸಿದ ಭಾಗಗಳು ಅಸಮಗ್ರವಾಗಿವೆ. ಮಾದ ರಿಗಾಗಿ–ಆದಿಪರ್ವದಲ್ಲಿ ಒಟ್ಟಿಗೆ ೩೬ ಸಂಧಿಗಳಿದ್ದು ಈಗ ಮುದ್ರಿತವಾದ ಗ್ರಂಥದಲ್ಲಿ ಕೇವಲ ಇಪ್ಪತ್ತೇ ಸಂಧಿಗಳು ಕಂಡುಬರುವವು. ಈ ೨೦ ಸಂಧಿಗಳಲ್ಲಿಯೂ ಸಾವಿ ರಾರು ಪದ್ಯಗಳು ಲೋಪವಾಗಿ ಹೋಗಿವೆ. ತೊರವೆಯ ರಾಮಾಯಣವನ್ನು ಮೀ ರಿದ ವಾಲ್ಮೀಕಿ ರಾಮಾಯಣವೆಂಬ ಇನ್ನೊಂದು ಭಾಮಿನೀಷಟ್ಪದೀ ಕಾವ್ಯವು ನ ಮ್ಮಲ್ಲಿ ಇದೆ. ಲಲಿತವಾದ ಶೈಲಿಯಿಂದಲೂ ಪ್ರೌಢಿಯಿಂದಲೂ ಇದು ತೊರವೆಯ ರಾಮಾಯಣವನ್ನು ಹಿಮ್ಮೆಟ್ಟಿಸುವಂತೆ ಇದೆ. ಶ್ರೀಮದ್ಭಾಗವತದ ಅನುವಾದವಾ ದ ನಿತ್ಯಾತ್ಮಶುಕಯೋಗಿವಿರಚಿತವಾದ ಮಹಾಗ್ರಂಥವೊಂದು ನಮಗೆ ದೊರೆತಿದೆ. ಇದು ಈಗ ಪ್ರಕಟವಾಗಿರುವ ಭಾಗವತ ಗ್ರಂಥದ ಮೂರ್ಮಡಿಯಷ್ಟಾಗಬಹುದು. ಹಂಪೆಯ ಅಮಾತ್ಯ ವೆಂಕಪ್ಪನಿಂದ ಪಾ। ಷ। ಯಲ್ಲಿ ರಚಿಸಲ್ಪಟ್ಟ ವಾಲ್ಮೀಕಿ ರಾ ಮಾಯಣವೂ, ಕಾಶೀಖಾಂಡ, ಬ್ರಹ್ಮೋತ್ತರಖಾಂಡ, ಶುಕಸಪ್ತತಿ ಕಥೆಗಳು, ಅಧ್ಯಾತ್ಮರಾಮಾಯಣ, ಯಾಜ್ಞವಲ್ಕ್ಯನೀತಿ, ಜ್ಞಾನವಾಸಿಷ್ಠ ಮುಂತಾದ ಭಾಮಿ ನೀ ಷಟ್ಪದೀ ಗ್ರಂಥಗಳೂ ಮೂಲೆಗುಂಪಾಗಿ ಕೂತಿರುವವು. ಭಾಷೆಯ ದೃಷ್ಟಿಯಿಂ ದಲೂ ವಿಷಯದ ಮಾನದಿಂದಲೂ ಇವು ಉತ್ಕೃಷ್ಟ ವರ್ಗಕ್ಕೆ ಸೇರಿದ್ದು ವಾಚನಾ ರ್ಹವಾಗಿವೆ. ಇವೆಲ್ಲಾ ಎಂದು ಬೆಳಕಿಗೆ ಬರುವವೋ ಇಂತಹ ಮಹತ್ಕಾರ್ಯಕ್ಕೆ ಕೈಹಾಕಿ ಕೊನೆಮುಟ್ಟಿಸುವ ಸಾಹಸಶಾಲಿಗಳು ಯಾವಾಗ ಹುಟ್ಟಿ ಮುಂದೆಬರು ವರೋ ಆ ವಾಗ್ದೇವಿಗೇ ಗೋಚರವಲ್ಲದೆ ನಮಗೆ ತಿಳಿಯಲು ಸಾಧ್ಯವಿಲ್ಲ. ಇದು ಕನ್ನಡ ಪದ್ಯಕಾವ್ಯಗಳ ಹಾಗೂ ಅವುಗಳ ಪ್ರಕಾಶಕರ ಅವಸ್ಥೆಯ ಸಾಮಾನ್ಯ ವರ್ಣನೆಯಾಯಿತು.

ಈ ಎಲ್ಲಾ ಸಂಕಟಗಳನ್ನು ಮುಂಗಂಡು ಬಹುದಿನಗಳ ವರೆಗೂ ಮನ ಸ್ಸಿನಲ್ಲಿರುವ ಲವಲವಿಕೆಯನ್ನೂ ಉತ್ಸಾಹವನ್ನೂ ಮನದಲ್ಲಿಯೇ ಹತ್ತಿಕ್ಕಿಕೊಂಡು ಕೂತಿದ್ದೆವು. ಆದರೆ ಆ ವಾಗ್ದೇವತಾ ಪ್ರೇರಣೆಯಿಂದ ಆರೇಳು ವರ್ಷಗಳ ಕೆಳಗೆ ಇಂತಹ ಉದ್ಗ್ರಂಥಗಳಲ್ಲಿ ಒಂದಾದ ಪರಶುರಾಮ ರಾಮಾಯಣವನ್ನು ಪರಿಶೋ

ಧಿಸಿ ಮುದ್ರಿಸುವ ಕಾರ್ಯವನ್ನು ಆರಂಭಿಸಿದ್ದಾಯಿತು. ಶಕೆ ೧೮೫೫ ನೆಯ ಭಾದ್ರಪದ ಮಾಸದಲ್ಲಿ ಮೊದಲಿನ ಆರು ಅಧ್ಯಾಯಗಳನ್ನು ಪ್ರಥಮ ಮಣಿಯಾಗಿ ಪ್ರಕಟಿಸಿದ್ದೂ ಆಯಿತು. ಗ್ರಂಥದ ಯೋಗ್ಯತೆಯು ಹಾಗೂ ಅದರ ಪ್ರಕಟಣೆಯ ಕಾರ್ಯದ ವಿಷಯವಾಗಿ ಜನತೆಯಿಂದ ಶಾಬ್ದಿಕ ಸಹಾನುಭೂತಿಯು ಸಾಕಷ್ಟು ದೊರೆದರೂ ಸಾಂಪತ್ತಿಕ ಸಹಾಯವು ಮಾತ್ರ ನಿರಾಶಾಜನಕವಾಗಿರುವುದು. ಅದೇ ವರ್ಷ (೧೯೩೩ ನೆಯ ಇಸವಿಯಲ್ಲಿ) ಉತ್ತರ ಕನ್ನಡ ಜಿಲ್ಲೆಯ ಪ್ರಾಥಮಿಕ ಶಿಕ್ಷಕ ಸಂಘದ ಸಮಿತಿಯವರೂ ಕಳೆದ ವರ್ಷ ಧಾರವಾಡದ ಕ. ವಿ. ವ. ಸಂಘದವರೂ ಅಲ್ಪಸ್ವಲ್ಪ ಧನಸಹಾಯ ಮಾಡಿದರು. ಮುಂಬಯಿ ಕರ್ನಾಟಕದ ಪತ್ರ ಪುಸ್ತಕ ಸಭೆಯವರು ಇದನ್ನು ಮಾಧ್ಯಮಿಕ ಶಾಲಾ ಪಠ್ಯಪುಸ್ತಕವಾಗಿ ಆರಿಸಿದುದಲ್ಲದೆ ಸಕಲ ರೀತಿಗಳಿಂದಲೂ ಸಾಲೆಗಳಲ್ಲಿ ಉಪಯೋಗಿಸಲು ಸಮ್ಮತಿಸಿದರು. ಆ ಮೇಲೆ ಮತ್ತೆ ೭ ರಿಂದ ೧೭ ರ ವರೆಗಿನ ೧೧ ಅಧ್ಯಾಯಗಳನ್ನೊಳಗೊಂಡ ೨ನೆಯ ಭಾಗವನ್ನು ಪ್ರಕಟಿಸಿದೆವು. ಈ ಅವಧಿಯಲ್ಲಿ ಎಲ್ಲಕ್ಕೂ ಹೆಚ್ಚಿನದೆಂದರೆ ಮುಂಬಯಿಯ ವಿಶ್ವವಿದ್ಯಾಲಯದವರು ೧೯೩೭-೩೮ ನೆಯ ಇಸವಿಯ ಸ್ಕೂಲ ಲೀವ್ಹಿಂಗ್ ಪರೀಕ್ಷೆಗೆ ಇದರ ಕೆಲವೊಂದು ಭಾಗವನ್ನು ನಿಯಮಿಸಿರುವರು. ಈ ರೀತಿಯಾಗಿ ಕರ್ನಾಟಕದ ಮುಂದಾಳುಗಳು ವಿಲಂಬವಾಗಿಯೂ ಮಂದಗತಿಯಿಂದಲೂ ನೀಡಿದ ಸಹಾಯ ಸಂಪತ್ತಿಯಿಂದ ಪ್ರೋತ್ಸಾಹಿತರಾಗಿ ಭವಿಷ್ಯದ ಉದಾರ ಅನುಕೂಲ್ಯಗಳನ್ನು ನೆರೆನಂಬಿ ಈ ವರ್ಷ ಮತ್ತೆ ಇದೇ ವಿಭಾಗವನ್ನು ಮೊದಲನೆಯ ಆವೃತ್ತಿಯಲ್ಲಿದ್ದ ದೋಷಗಳನ್ನು ತಿದ್ದಿ ಕಠಿಣ ಶಬ್ದಾರ್ಥದೊಂದಿಗೆ ಪ್ರಕಟಿಸಲು ಮುಂದೆ ಬಂದೆವು. ಒಟ್ಟಿಗೆ ಈಗ್ರಂಥದಲ್ಲಿ ೪೩ ಅಧ್ಯಾಯಗಳಿರುವವು. ಈ ಗ್ರಂಥವನ್ನು ಪ್ರಕಟಿಸಿದ ಬಳಿಕ ವಾಲಗಳ್ಳಿಯ ವರದ ವಿಠ್ಠಲನೆಂಬ ಮಹಾಕವಿಯಿಂದ ವಿರಚಿತವಾದ ವಾಲ್ಮೀಕಿ ರಾಮಾಯಣವೆಂಬ ಸತ್ಕಾವ್ಯದ ಪ್ರಕಟನೆಯ ಕಾರ್ಯವನ್ನು ಕೈಕೊಳ್ಳುವ ಸಿದ್ಧತೆಯನ್ನು ಮಾಡತೊಡಗಿರುವೆವು. ಇದರಲ್ಲಿ ಸುಮಾರು ಮೂರು ಸಾವಿರ ಭಾ। ಷಟ್ಪದಿಗಳಿದ್ದು ಇದು ೫೦ ಸಂಧಿಗಳಾಗಿ ವಿಭಾಗಿಸಲ್ಪಟ್ಟಿದೆ.

ಒಟ್ಟಿನ ಮೇಲೆ ಕೇವಲ ಮಾತೃಭಾಷೆಗೆ ಒದಗಿರುವ ಹಾಗೂ ಒದಗಬಹುದಾಗಿರುವ ದುರವಸ್ಥೆಯನ್ನು ನೆನೆದು ಮನಮರುಗಿ ಈ ಬಹು ಕಷ್ಟಸಾಧ್ಯವಾದ ಕಾರ್ಯದಲ್ಲಿ ಪ್ರವೃತ್ತರಾದ ನಮಗೆ ಅಖಿಲ ಕರ್ನಾಟಕದ ಭಾಷಾಭಿಮಾನಿಗಳು ಸಹಾಯ ಮಾಡಿದರೆ ಮಾತ್ರವೇ ನಮ್ಮ ಮನಸ್ಸಿನ ಕೋರಿಕೆಯು ಕೆಲಮಟ್ಟಿಗಾದರೂ ಪೂರ್ಣವಾಗುವಂತಿದೆ. ಹೆಚ್ಚಿಗೇನು ಹೇಳುವುದು? ಶಕ್ತ್ಯನುಸಾರ ಸೇವೆಯನ್ನು ಸ್ವೀಕರಿಸುವುದು ಭಾಷಾಭಿಮಾನಿಗಳ ಕರ್ತವ್ಯವು.

**ಕಾರ್ಯದರ್ಶಿ.**

ಓಂ

✻ **ಶ್ರೀಃ** ✻

# ಶ್ರೀ ಪರಶುರಾಮ ರಾಮಾಯಣ.

## ನಾಂದೀ ಪೀಠಿಕಾಧ್ಯಾಯ.



॥ ವಾರ್ಧಿಕ ಷಟ್ಪದಿ ॥

* ಶ್ರೀರಾಮಚಂದ್ರ ಸೀತಾಸ್ಯಾರವಿಂದಾರ್ಕ ।
ಘೋರಾಂಧಕಾರಮಾರ್ತಾಂಡ ದುರಿತಾದ್ರಿಪವಿ ।
ಕಾರುಣ್ಯನಿಧಿ ಕರುಣದಿಂ ಪರಶುರಾಮ ರಾಮಾಯಣದೊಳಲ್ಲಲ್ಲಿಗೆ ॥
ಸೇರಿರ್ಪಲೋಪಾಗಮಾದೇಶ ದೋಷಗಳ ।
ನಾರ್ಯವೃಷರೆ ಶೋಧಿಸುತ್ತೈದೆ ತಿದ್ದುತಿದ ।
ಸಾಂಗಜಿಪಂತೆಸಗಲೆನಗೆ ಸನ್ಮತಿಯಿತ್ತು ಪೊರೆಯೆನುತೆ ವಂದಿಸುವೆನು ॥

* (೨) ಶ್ರೀಯೆ ಕಮಲಾಲಯೆಯೆ ಲೋಕಮಾತೆಯೆ ಜಗ ।
ನ್ಮಾಯೆಯತಿಚಂಚಲೆಯೆ ಪರ್ಪಾರಿವಾಹನನ ।
ಜಾಯೆಯೆ ದೀನರುದ್ಧಾರಿಯೆ ದುರಿತಸಂಹಾರಿಯೆ ಕಂದರ್ಪನಾ ॥
ತಾಯೆ ಸತ್ಕೀರ್ತಿಮಾಲೆಯೆ ಪರಶುರಾಮ ರಾ ।
ಮಾಯಣವನುರೆ ಶೋಧಿಸುತೆ ತಿದ್ದಲಾರುಮತಿಯ ।
ನೀಯೆನಗೆ ತಾಯೆ ನಗೆಗೂಡಿ ನೋಡೆನುತಡಿಗೆ ವಂದಿಪೆಂ ಭಕ್ತಿಯಿಂದೆ ॥

* (೩) ಶ್ರೀ ರಮೇಶನಸಖಂ ತ್ರಿಪುರಾರಿ ಶಂಕರನು ।
ಮಾರಮಣ ಮಾರಮಾರಣ ದಕ್ಷಯಜ್ಞಪಂ ।
ಹಾರಿಪಿಕನತಿಕರುಣದಿಂ ಪರಶುರಾಮರಾಮಾಯಣದೊಳಲ್ಲಲ್ಲಿಗೆ ॥
ಸೇರಿದುರುತರದೋಷಗಳನೈದೆ ಶೋಧಿಸುತೆ ।
ಚಾರು ಸತ್ಕಾವ್ಯಮಪ್ಪಂತೆನಗೆ ತಿದ್ದಲುರೆ ।
ದಾರಿಯಂ ತೋರಿಸುತೆ ಸನ್ಮತಿಯನಿತ್ತು ರಕ್ಷಿಪುದೆನುತೆ ವಂದಿಸುವೆನು ॥

---

ಟೀಪು:— ಈ (*) ಗುರ್ತ ಮಾಡಿದ ಪದ್ಯಗಳು ಅಧಿಕ ಪಾಠವೆಂದರಿಯಬೇಕು.

* (೪) ಶ್ರೀ ಗೌರಿ ಶಂಕರಿಯೆ ದೀನಜನರುದ್ಧಾರಿ ।
ನಾಗೇಂದ್ರನಾತ್ಮಜಾತೆಯೆ ವರದೆ ಕಲ್ಯಾಣಿ ।
ನಾಗಾನನನಮಾತೆಯಿದನೈದೆ ಶೋಧಿಸುತೆ ಸೇರಿರ್ಪ ದೋಷಂಗಳಾ ॥
ಸೀಗಾಡಿ ತಿದ್ದುತ್ತೆ ಲೋಕದಲಿ ನವ್ಯ ಕಾ ।
ವ್ಯಾಗಾರಮಪ್ಪಂತೆಸಗಲೆನಗೆ ಸುಮತಿಯಂ ।
ಬೇಗಿತ್ತು ಕರುಣದಿಂ ಪೊರೆಯೆನುತ್ತಡಿದಾವರೆಗೆ ಬಿಡದೆ ವಂದಿಸುವೆನು ॥

* (೫) ಶ್ರೀರಮಾಧವನ ನಾಭಿಯಕಮಲದಲ್ಲುದಿಸಿ ।
ಚಾರು ಪದ್ಮಾಸನದೆ ರಾಜಿಸುತ್ತಿರೇಳು ।
ಧಾರುಣಿಯೊಳಖಿಲಜೀವಿಗಳ ಪುಟ್ಟಿಸುವವನೆ ಕರುಣದಿಂದೀಕೃತಿಯಲಿ ॥
ತೋರಿಬಹ ಲೋಪಾಗಮಾದೇಶ ದೋಷಗಳ ।
ನಾರಿಸಿ ತೆಗೆದು ತಿದ್ದಲೆನಗೆ ಸನ್ಮತಿಯ ಕೈ ।
ಸಾರಿಸುತೆ ಪೊರೆಯೆನುತ್ತಡಿದಾವರೆಗೆ ಭಕ್ತಿಯಿಂದೈದೆ ವಂದಿಸುವೆನು ॥

* (೬) ಶ್ರೀ ಶಾರದಾಂಬೆಯೇ ನಾನಾರ್ಥದುರುಶಬ್ದ ।
ಕೋಶಾಗರೆಯೆ ವರದೆ ಕಲ್ಯಾಣಿ ವಾಣಿ ವಾ ।
ಗೀಶಾದಿ ನಮಿತಚರಣಾಂಭೋಜಯುಗಳೆಯೀಕೃತಿಯೊಳಿಹ ದೋಷಗಳನು ॥
ಸೋಸುತ್ತೆ ಮಿಗೆತಿದ್ದಲಿಕ್ಕೆನಗೆ ಸುಮತಿಯನು ।
ಕೈಸಾರಿಸುತ್ತೈದೆ ಕರುಣದಲಿ ಕರ್ನಾಟ ।
ಭಾಷಾಬ್ಧಿಯಲ್ಲೊಪ್ಪುವಂತೆಸಗಿ ಕಾಪಾಡೆನುತ್ತೆ ನಮಿಸುವೆನು ತಾಯೆ ॥

* (೭) ಶ್ರೀ ರಮೇಶಾತ್ಮಸಖನಾತ್ಮಜಂ ವಿಘ್ನಮಂ ।
ವಾರಿಸುತೆ ನಿರ್ವಿಘ್ನಮಂ ತಪ್ಪದೆನಗೆ ಕೈ ।
ಸೂರೆಗೊಳಿಸೀಯುತಿದನುರೆ ಶೋಧಿಸುತೆ ತಿದ್ದಲೈದೆ ಸನ್ಮತಿಯನಿತ್ತು ॥
ಘೋರಡವಿಯಲ್ಲಿಕಾರ್ಗತ್ತಲೆಯೊಳಡಿಗಡಿಗೆ ।
ದಾರಿದಪ್ಪುತ್ತೆಡವಿ ಬೀಳದಂತೈದೆ ಹೆ ।
ದ್ದಾರಿಯಂ ತೋರಿಸುತೆ ಪಾರಗಾಣಿಪುದೆನುತೆ ವಂದಿಪೆಂ ಭಕ್ತಿಯಿಂದೆ ॥

* (೮) ಅರಿಯೆನೈ ವ್ಯಾಕರಣಸೂತ್ರಛಂದಸ್ಸಗಳ ।
ಪರಿವಿಡಿಯ ನಾನಾರ್ಥಶಬ್ದಾಂಬುಧಿಯ ನೆಲೆಯ ।
ಗುರುವರ್ಯ ಗೋಪಾಲಕೃಷ್ಣವಿಠ್ಠಲ ಶ್ರೀನಿವಾಸನಂಘ್ರಿಸರೋಜಮಾ ॥
ಸ್ಮರಿಸುತ್ತೆರಗಿ ಪರಶುರಾಮ ರಾಮಾಯಣವ ।
ನುರೆತಿದ್ದುವೆನು ಮರೆತುಳಿದ ದೋಷಗಳು ಕಣ್ಣಿ ।
ಗಿರಿಯೆ ಹರಿಚಕ್ರದಾ ವಕ್ರರುಚಿಯಿಂದರಿತು ಮನ್ನಿಸಲಖಿಲ ವಿಬುಧರು ॥

( ಪೀಠಿಕಾರಂಭ )

(೯) ಶ್ರೀರಮೆಯು ಮುಗುಳ್ನಗೆಯು ಮಲ್ಲಿಗೆಯುನರಳಿಸುತೆ।
ಸೂರಿ ಸದ್ರೋಲಂಬಗಳನೈದೆ ನೆರೆಯಿಸುತೆ।
ಚಾರು ಮುನಿ ಹೃದ್ಧ್ಯಾನವೆಂಬುರುರಸಾಲವಂ ಮೆರೆಯಿಸುತೆ ಸೌರಂಭದಾ॥
ಸಾರದಿಂ ಭಾಗವತ ಕೋಗಿಲೆಯ ಮೊರೆಯಿಸುತೆ।
ತೋರಿಸುತ್ತೆರಡನೆ ವಸಂತನೊಲು ನಲಿವ ಬೊ।
ಬ್ಬೂರ ವಾಸ ವಸಂತ ಮಾಧವನು ಸನ್ಮತಿ ಶುಭೋದಯುವನೆಮಗೀಯಲಿ॥

(೧೦) ಪೊಕ್ಕುಳಿನ ಪೂವಿನಿಂದುದ್ಭವಿಸಿದಾಮಹಿಮ।
ನಕ್ಕರಿಂದಖಿಲಭೂತಂಗಳಿಂದೆಲ್ಲವುಂ।
ಮಕ್ಕಳಾಟಕೆಯಿಂದೆ ನಿರ್ಮಿಸುತ್ತಾನಂದದಾಟದಿಂ ಮಿಗೆ ಕುಣಿಸುತೆ॥
ತಕ್ಕತಕ್ಕನುಭವಂಗಳನೈದೆ ಬಿಡದೆ ಗಂ।
ಟಿಕ್ಕುತುರೆ ಸದ್ರಜೋಗುಣದೊಡನೆ ಜೆರೆದವಗೆ।
ಸಿಕ್ಕದೇ ನಲಿದೀಕ್ಷಿಸುತ್ತಿರ್ಪ ಚತುರಾಸ್ಯನಿರದೆ ಸುಮತಿಯನೀಯಲಿ॥

(೧೧) ಮದನಾರಿ ಪುರವೈರಿ ಗಜದೈತ್ಯ ಸಂಹಾರಿ।
ತ್ರಿದಶ ಗಣ ಸಾಕಾರಿ ದಶದಿಶಾ ಸಂಚಾರಿ।
ವಿಧು ನದೀದ್ವಯ ಧಾರಿ ದುರಿತ ವಿಟಪಿ ಕುಠಾರಿ ಫಣಿ ಕಟಕ ಕುಲ್ಯ ಹಾರಿ॥
ವಿಧಿಪಿತಂಗನುಸಾರಿ ವೃಷಗಮನ ಶುಭಕಾರಿ।
ವಿದಿತ ಧವಳ ಶರೀರಿ ರಜತಾದ್ರಿ ತುದಿಯೇರಿ।
ಚದುರಿಂದೆ ನೆಲಸಿರ್ಪ ಸರ್ವಮಂಗಳೆಯೆರೆಯನೀಯಲೆಮ್ಗಿಷ್ಟವನುರೆ॥

(೧೨) ಗಿರಿಜಾತೆ ಕಲ್ಯಾಣಿ ಫಣಿವೇಣಿ ಶರ್ವಾಣಿ।
ಸರಸಿಜಾಲಯೆ ಮಾಯೆ ಹ್ರೀಂಕಾರಿಯೋಂಕಾರಿ।
ಕರುಣ ವಾರಿಧಿ ಪುಣ್ಯ ಚಾರಿತ್ರೆ ಸಾವಿತ್ರಿ ಖಲರಕ್ತ ಬೀಜ ವಿಜಯೇ॥
ಸೆರೆ ಪರಂಜ್ಯೋತಿ ಸದ್-ಭ್ರಮರಾಂಬೆ ಮೂಕಾಂಬೆ।
ಪರಮ ಮಂತ್ರಾಧಾರೆ ಮೀನಾಕ್ಷಿ ಕಾಮಾಕ್ಷಿ।
ಶರಣರವಗುಣವನೀಕ್ಷಿಸದೆ ಸತ್ಕರುಣದಿಂದೆಮ್ಮನುರೆ ಪೊರೆಯೆ ತಾಯೆ॥

(೧೩) ಶತಕೋಟಿಯುತ ದಿವ್ಯ ಮಣಿ ಮಕುಟ ಮಸ್ತಕದ।
ಶ್ರುತಿ ಚಲ್ವ ಕುಂಡಲ ಸು ಗಂಡ ಯುಗ ಮದ ಚಕ್ಷು।
ವತಿರಮ್ಯ ಪಾಶಾಂಕುಶದ ಹಸ್ತ ಮೋದಕದ ಸುಂಡಲಿನ ಸಿರಿಡೆಸಾಳ್ಪಿನಾ॥
ಅತಿ ಶರಚ್ಚಂದ್ರೋಪಮಾನದುರುಧವಲ ರಾ।
ಜಿತಮುಪ್ಪ ಪರವೈರಿದಂತ ಹೇರಂಭ ಶಾ।
ರ್ವತಿಗೆ ನಗೆ ಮುದ್ದೀವ ಸಿದ್ಧಿಗಣನಾಯಕನೆಮಗೆ ಬುದ್ಧಿಯಂ ವರ್ಧಿಸೈ॥

(೧೪) ಭಜಕಜನಂತಾಧಾರೆ ಭಾನು ದೀಧಿತಿ ಪೂರೆ ।
ತ್ರಿಜಗ ಪೂಜಿತ ಚರಣೆ ರತ್ನ ಮುಕ್ತಾಭರಣೆ ।
ನಿಜ ಮುನಿವ್ರಜ ಪಾಲೆ ನಾಕ ಸಂಕುಲ ಲೋಲೆ ಗಮನಾರ್ಥ ಶಬ್ದಶೀಲೆ ॥
ಅಜನ ಪಟ್ಟದ ರಾಣಿಯಾಮ್ನಾಯಶುಕವಾಣಿ ।
ರಜತ ಮೇಘ ಸು ವರ್ಣೆ ರತ್ನ ಕುಂಡಲ ಕರ್ಣೆ ।
ವಿಜಯೆ ಜಯೆ ವಾಗ್ದೇವಿ ವಿದ್ಯಾರ್ಥಿ ಜನ ಜೀವಿ ಮತಿಯಿತ್ತು ತಾಯೆ ಕಾಯೆ ॥

(೧೫) ಮಿತ್ರ ಬಾಂಧವ ಪಕ್ಷ ಸೋಮಕುಲಕಧ್ಯಕ್ಷ ।
ಶತ್ರು ಕರಿ ಮೃಗರಾಜ ವಿಮಲ ಮಂಗಲ ತೇಜ ।
ಚಿತ್ರ ಪಟ ಕಟಿಯರುಣ ವಿಬುಧರಾಕೃತಿ ಕರಣ ಸತ್ಪಾತ್ರ ಗುರುಚರಿತ್ರ ॥
ಸ್ತೋತ್ರ ಹೃತ್ಕವಿ ಫಲದ ಮಂದಸ್ಮಿತಾಸ್ಯ ಶ್ರೀ ।
ಕ್ಷೇತ್ರ ಪೂಜಾಸಕ್ತ ಫಣಿಕೇತುವೇ ಗ್ರಹ ವಿ ।
ಧಾತ್ರ ನಿನ್ನಾಧೀನ ಪಾಲಿಸೆಮ್ಮಿಷ್ಟವಂ ನೃಪವರ್ಯ ಕಾರ್ತವೀರ್ಯ ॥

(೧೬) ಅಧ್ಯಾತ್ಮದಾಧಾರ ಮೂಲಮಂತ್ರಾಗಾರ ।
ವಿಧ್ಯುಕ್ತ ವಾಕ್‌ಲಲಿತ ನಿಗಮಾರ್ಥ ಹೃತ್ಕಲಿತ ।
ಖದ್ಯೋತ ತತ್ತುಲ್ಯ ಸುಪ್ರಭಾಮಾಂಗಲ್ಯ ಷಡ್ದರ್ಶನ ಸ್ಥಾಪಕ ॥
ಪ್ರದ್ಯುಮ್ನ ಜಿತ ಸದೃಶ ವಾಗ್ದೇವಿಯಾಕರ್ಷ ।
ಣೋದ್ಯಾನ ಭೃಂಗಾಂಗ ಶಂಕರಾಚಾರ್ಯನ ಪ ।
ದಧ್ಯಾನಮಂ ಮಾಳ್ಪೆ ತುಂಗಭದ್ರಾತಟದ ಶೃಂಗೇರಿ ಯತಿವರ್ಯನ ॥

(೧೭) ರೇಣುಕಾಸತಿಗೆರಗುತಾದಿಕವಿಯಂ ಭಜಿಸಿ ।
ಭಾನುವಂ ಸ್ಮರಿಸುತ್ತೆ ವ್ಯಾಸನಂ ನುತಿಸುತ್ತೆ ।
ಕ್ಷೋಣಿಯಮರರ ಪೊಗಳಿ ಕುಕವಿಗಳನತಿಗಳೆದು ಸತ್ಕವಿಗಳಂ ಧ್ಯಾನಿಸಿ ॥
ವಾನರೇಂದ್ರನ ನೆನೆದು ದೇವತತಿಗಭಿನಮಿಸಿ ।
ಜಾಣನುಡಿಯನುಸರಿಸಿ ಹೀನನುಡಿಯಂ ತ್ಯಜಿಸಿ ।
ಸಾನುರಾಗದೊಳರಿಪುವೆಂ ಪರಶುರಾಮ ರಾಮಾಯಣವಜಾಜ್ಞೆಮೆರಸಿ ॥

(೧೮) ಕಪ್ಪೆಯಂ ಹಾಯೆಂದರಾಂ ಸರ್ಪಶಾಯಿಯೆಂ ।
ದೊಪ್ಪುವರೆ ಜಂಬೂಕನಂ ಶಿವನೆನಲ್ ಜಗದೆ ।
ಕಪ್ಪುಗೊರಲಂಗೆಣೆಯುಹನೆ ಮೇಕೆಯಂ ಜೋಕೆಯಿಂದಜನೆನಲ್ ಬೊಮ್ಮನೆ ॥
ಒಪ್ಪುವಿಹ ತುಂಬಿಯಂ ವಜ್ರಿಯೆನಲಿಂದ್ರನೇ ।
ನೊಪ್ಪುವುಪನೆಗಳಿಲ್ಲದೊಡಕವಡಕೆಯೊಲಿಪ್ಪ ।
ಸಪ್ಪೆಗವಿ ರಸಭರಿತ ಕವಿರಾಜನಪ್ಪನೇಂ ಪಕ್ಕೆಗಿಡೆ ಕವಿ ನಾಮವು ॥

(೧೯) ಕಚಕುಚಗಳಿಲ್ಲದಿಹ ನಾರಿಯು ವಿಲಾಸ ಪ್ರದು ।
ವಚನ ಮರ್ಯಾದೆಯಿಲ್ಲದ ನೆಂಟನೊಪ್ಪುವಂ ।
ರಚನೆಯಿಲ್ಲದ ಕಾವ್ಯಗಳ್ ಘೋರತರದುಃಖಮಹುದು ಕಂಠಕ್ಷೋಭವು ॥
ಸಚರಾಚರಗಳಂ ಪರೀಕ್ಷಿಸಲು ನಿಶ್ಚಯಂ ।
ಸುಚರಿತ್ರರೀಕ್ಷಿಸರೆ ಬಯಸುವರೆ ಮೆಚ್ಚುವರೆ ।
ವಚಿಸಲೇಂ ತನ್ನಡಿಗೆ ತಾನೆರಗಲಾಯುಷ್ಯ ವರ್ಧಿಪುದೆ ನಿರ್ಭರದಲಿ ॥

(೨೦) ಸೊನ್ನಗಾರಗೆ ಶುದ್ಧಭಂಗಾರದೊರೆಯೆ ಸಂ ।
ಪನ್ನ ಚಿತ್ರಕಗೆ ಸುಂದರಗಾತ್ರ ಸಿಗಲು ಬಲು ।
ಚನ್ನಗೆ ಸುಜನಗೆ ಪರತತ್ವ ಕೈಸೇರಿದರೆ ಮಾಲೆಗಾರಗೆ ಕುಸುಮವು॥
ತನ್ನೆದುರು ಪರಿಮಳಿಸುತರಳೆ ದೊರೆತರೆ ಕವಿಗ ।
ಳಿನ್ನುಜಲು ಪುಣ್ಯ ಸತ್ಕಥೆಯನುರೆ ಕೇಳಿದರೆ ।
ಮುನ್ನೆಸಗದಿರ್ಪರೆ ನಗವನಾಕಾರ ನಿಸ್ಸಂಗಮಾಲಾಕೃತಿಗಳ ॥

(೨೧) ಬಾಲಕಂ ತೊದಲಿಸುತೆ ನುಡಿದರಾಮೋದಮಂ ।
ತಾಳದುರೆ ತಮ ತಮಗೆ ತಾತ ಮಾತೆಯರದಂ ।
ಚಾಳಿಸುತೆ ಜರೆದಪರೆ ಹರಿಗೆ ಮೆಚ್ಚಾದುದಂ ಧರೆಯಲ್ಲಿ ಮೂರ್ಖಜನರು ॥
ಆಲಿಸದೆ ಬಿಟ್ಟಪರೆ ಛಂದಸ್ಸುಲಕ್ಷಣವ ।
ಪೇಳಲಿಲ್ಲೆನಗೊಬ್ಬಗುರುವಾಗಿ ಲೋಕದಲಿ ।
ಲೀಲೆಯಿಂ ಗುರುವರಂ ಪರಮಾತ್ಮ ಪೇಳ್ವಿಸಿದೊಲಾಂ ಪೇಳ್ವೆನೀಕೃತಿಯನು ॥

(೨೨) ಪುಟವಿಡುತೆ ಶಬ್ದದಿಂ ನಿಗುಚುತೇ ಪ್ರಾಸಿನಿಂ ।
ಘಟಿಸುವಷ್ಟಾದಶ ಸು ವರ್ಣನೆಗಳಿಂ ಬೆಸೆದು ।
ಚಟುಳ ನವರಸದೆಕೊಳೆಯಂ ತೊಳೆದು ಮಿಗೆ ಬೆಳಗಿನಾನಾರ್ಥರತ್ನಂಗಳ ॥
ಪಟುಗೊಳಿಸಿ ಯುಕ್ತಿಯಿಂ ತೂಗುತೊಪ್ಪೆಯನಿಕ್ಕಿ ।
ಪಟಣೆಯಿಂ ನವ್ಯ ಹೇಮಾಭರಣತತಿಗಳಿಂ ।
ವಿಟಗಾರ್ತಿಯಂತಲಂಕರಿಸೆ ಕವಿತಾಂಗನೆಯುನೀಕ್ಷಿಸಲ್ ಭ್ರಮಿಸದಿಹರೆ ॥

(೨೩) ಅಂಬಿಕಾವಿಜಯಮಂ ಭಾಮಿನಿಯೊಳರಿಪಿಹಂ ।
ಮುಂಬರದು ಮಗುಳಿದಂ ವಾರ್ಧಿಕದ ಷಟ್ಪದಿಯೊ ।
ಳಂಬುಜಾಕ್ಷನ ಕೃಪೆಯೊಳುಸುರುವಂ ಕೃತಿಕರ್ತೃ ಬೊಬ್ಬೂರ ರಂಗಪ್ಪನು ॥
ರಂಭೆಯು ಸು ಕಲ್ಪಫಲಭೋಗಿಗಳ್ಗರೆ ಪ್ರಿಯಂ ।
ರಂಭೆಯುಮೊಗದಮುದ್ದು ಸುರಪತಿಗೆ ಸಾಧ್ಯ ಪಾ ।
ರಂಭ ಕಾವ್ಯಂ ಸತತ ರಸಿಕರ್ಗೆ ಹಿತಕರಂ ಕಪಿ ರತ್ನಮುಂ ಬಲ್ಲುದೆ ॥

(೨೪) ರಸಿಕರಿಗೆ ಶೃಂಗಾರ ವೀರ ಭಟಂಗೆ ವೀರ ।
ಪಿಸುಣರಿಗೆ ಬೀಭತ್ಸ ಜಡಂಗುರತರ ರೌದ್ರ ।
ಶಿಶುಗಳಿಗೆ ಶಾಂತಿಯುವರಿಗದ್ಭುತ ಭಕ್ತರಿಗೆ ಕರುಣ ಖಳ ಜನರಿಗೆ ॥
ಅಸಮ ಭಯ ದುರ್ಜನರಿಗುರೆ ಹಾಸ್ಯರಸವ ಪಸ ।
ರಿಸುವುದನಿಶವು ಪರಶುರಾಮ ರಾಮಾಯಣವು ।
ವಸುಧೆಯಲಿ ರಾಮನಂ ಧ್ಯಾನಮಂ ಗೆಯ್ದವಂ ಪರಶಿವಂ ಪರಮಾತ್ಮನು ॥

*(೨೫) ಧರಣಿಯಲಿ ಕಾರ್ತವೀರ್ಯಂ ಜನಿಸಿ ದತ್ತಮುನಿ ।
ವರನಿಂದೆ ಚೌಷಷ್ಟಿ ವಿದ್ಯಗಳನರಿತು ಮಿಗೆ ।
ತರುಣಿ ಕಾಶ್ಮೀರೆಯಂ ವರಿಸುತ್ತೆ ಪಿತನಶ್ವಮೇಧಮುಖಮಂ ಸಾಗಿಸಿ ॥
ದೊರೆತನವ ಕೈಕೊಳ್ಳುತ್ತೈನೂರರಸಿಯರಂ ।
ವರಿಸಿ ರೇವಾಧುನಿಯೊಳೈದೆ ನೀರಾಟಮಂ ।
ನೆರವೇರಿಸುತ್ತೆ ರಾವಣನ ಸೆರೆಯಿಟ್ಟಜನ ನುಡಿಯಿಂದೆ ಬಿಟ್ಟುದನರಿ ॥

(೨೬) ಪರಶುರಾಮಂ ಜನಿಸಿ ಪಿತನಾಜ್ಞೆಯಿಂ ಸಹೋ ।
ದರರೊಡನೆ ಮಾತೆ ಶಿರಗಡಿದವರ ಜೀವಮಂ ।
ಬರಿಸಿ ಬಳಿಕೆಬ್ಬಿಸಿದ ಮಹಿಮೆಯಂ ಕೃತವೀರ್ಯ ಸಂಭವಂ ಸುರಭಿಯನರಿ ॥
ಪುರಕೊಯ್ಯಲಪ್ಪಳಿಸುತವನ ಸುತನಿಂದಳಿದ ।
ವರ ಮಹಾಜಮದಗ್ನಿಗಸುಗೊಳಿಸಿ ಪಾರ್ಥಿವರ ।
ನಿರದಟ್ಟಿ ಸದೆದುದಂ ವಿಪ್ರರ್ಗೆ ಧರಣಿಯಂ ಕೊಟ್ಟುದಂ ವಿಸ್ತರಿಪೆನು ॥

(೨೭) ಸರ್ವ ಕುಸುಮಂಗಳ ಸೌರಭ್ಯ ಸಾರಗಳ ನೇ ।
ಸರ್ವ್ವದಯದಿಂ ಸಂಜಿತನಕ ಜೇನ್ನೊಣಗುಡಿದು ।
ಗರ್ವದಿಂ ಮತ್ತುಗುಳಿ ಮಧುರಸಮಿದೆಂದು ತೋರ್ಪಂತಲ್ಲಮೀಕೃತಿ ರುಚಿ ॥
ಉರ್ವಿಗತಿಶಯಮಾದ ರಾಮ ಚರಿತಾಮೃತಂ ।
ಸರ್ವರುಂಡರು ಸರ್ವಕಾಲದಲಿ ತೀರದಿದು ।
ನೀರ್ವಡೆದು ಪುಳಿಪುಟ್ಟಿ ನಸಿವುದಿಲ್ಲದರಿಂದೆ ಸವಿದವಂ ಸರ್ವಜ್ಞನು ॥

(೨೮) ಸಲೆ ಪಂಕದೊಳ್ ಪುಟ್ಟಿದಬ್ಜಮೆಂದಾಹರಿಯು ।
ಕಳೆದನೇನಳಟದಂ ನಾಭಿಯಂ ಮಾಡಿಕೊಂ ।
ಡೊಲಪಿನಿಂದಾ ಪದ್ಮದಿಂದಜನ ಪಡೆಯಲಿಲ್ಲವೆ ಜಗದೆ ಸತ್ಪುರುಷರು ॥
ಕಲಿಯುಗದ ಬಡ ವಿಪ್ರನೆಂದರಿತಿದಂ ।
ಕಳೆಯದುರೆ ನಿರ್ವಹಿಸಿ ಸವಿನುಡಿಯನಾಲಿಸುವು ।
ದಿಳೆಯೊಳಾನಲ್ಪಜ್ಞನಲ್ಲದುರೆ ಸರ್ವಜ್ಞನಲ್ಲ ಪರಶಿವನಲ್ಲದೇ ॥

(೨೯) ನಿರಸ ನಿರ್ಜೀವಿಯಾದಾವೇಣು ಕೃತ ಸುಷಿರ ।
ಪರಿಪರಿಯು ಸುಸ್ವರವ ತನ್ನಿಂದ ತಾನೆಸಗು ।
ತಿರುವದೇಂ ನುಡಿಸುವವ ಬೇರಿಪ್ಪ ರವಿಕಾಣದಿಪ್ಪುದಂ ಕವಿ ಕಾಣನೇ? ॥
ವರ ಪರಶುರಾಮ ರಾಮಾಯಣವಸಿಳೆಯೊಳಾ ।
ಪರಮಾತ್ಮನೂಹಿಸಿದ ತೆರದೊಳಾನುಸುರುವೆಂ ।
ಕೊರತೆ ಕುಂದೆನಗಿಲ್ಲ ಶಿಷ್ಯನವಮನ್ನಣೆಯು ಗುರುವಿಗಲ್ಲವೆ ನೈಜದೆ ॥

(೩೦) ಮೇರುವಿನಪಾಚಿ ದಿಗ್ಭಾಗದಲಿ ಪರಿಯುತಿಹ ।
ಚಾರು ವೇದಾವತೀ ತೀರದಲಿ ನೆಲಸಿರ್ದ ।
ತೇರ ಘನ ಮಲ್ಲೇಶ ದೇವರ ಕಟಾಕ್ಷದಿಂ ಪುರಗಳ್ಗೆ ಹಿರಿಯ ಪುರವು ॥
ಧಾರುಣಿಯೊಳೆಸಿಸುತ್ತೆ ತೋರುತಿಹುದಾಪುರಕೆ ।
ಸೇರಿರುವ ಕರಣಿಕಂ ವರಶೌನಕಾಖ್ಯನಾ ।
ದಾರಿಸಿಯ ಗೋತ್ರಜಂ ಬಳಿಕಪ್ಪ ರಂಗಜಂ ಪೇಳ್ದಿನೈ ಬೊಬ್ಬೂರನು ॥

(೩೧) ಅಪ್ರಹುಡರತಿ ಕಷ್ಟವಾದಿ ಪ್ರಾಪಂಡಿಯಾ ।
ದಪ್ರಯೋಜಕರಿಗುರೆ ದುರ್ಬೋಧೆ ದೂಷಿಕರಿ ।
ಗಪ್ರಮಾಣಿಕರಿಗಾತ್ಮ ಸ್ತುತಿಯ ಹಿಂಸಕರಿಗರುಹ ಬೇಡೀಸಾರವಾ ॥
ಸುಪ್ರಹುಡ ಸರ್ವಜ್ಞರುರೆ ಸಾರ ಹೃದಯರು ಶು ।
ಭ ಪ್ರಕೃತಿಯುಳ್ಳಧಿಕ ವಿತರಣ ವಿಚಕ್ಷಣರಿ ।
ಗೀಪ್ರಬಂಧೋಕ್ತಿ ಸರಸೋಕ್ತಿಗಳ ವಿಸ್ತರಿಸಿ ಸೂಚಿಸುವದನವರತವು ॥

* (೩೨) ಧರೆಯುಮರ ಬೊಬ್ಬೂರೊಳಿರ್ದ ತಿಪ್ಪಣ್ಣನ ಕು ।
ವರನ ಪೌತ್ರನ ಸುತಂ ಬೊಬ್ಬೂರ ರಂಗಪ್ಪ ।
ನೊರೆದೀ ಪರಶುರಾಮ ರಾಮಾಯಣದೆ ನಾಂದಿ ಪೀಠಿಕಾಧ್ಯಾಯದಲ್ಲಿ ॥
ಇರುವ ನಯನಾಗ್ನಿ ಪದ್ಯಗಳ ಧಾರೇಶ್ವರದ ।
ನೆರೆಗಿಹ ಕಡೇಕೋಡಿ ಪರಮಯ್ಯ ಹೆಗ್ಗಡೆಯ ।
ಪಿರಿಯಣುಗ ವೆಂಕಪ್ಪ ಶೋಧಿಸುತೆ ತಿದ್ದಿದಂ ಶ್ರೀನಿವಾಸನ ಕೃಪೆಯಲಿ ॥

ಅಂತು ನಾಂದಿ ಪೀಠಿಕಾಧ್ಯಾಯ ೧ಕ್ಕೆ ಪದ್ಯ ೩೨ ಕ್ಕೆ

ಮಂಗಳಮಸ್ತು.

# ೨ ನೇ ಅಧ್ಯಾಯ.

**ಸೂಚನೆ** ॥ ಸ್ವಸ್ತಿಯಿಂ ವಾಲ್ಮೀಕಿ ರಾಮ ಚಾರಿತ್ರವಂ ।
ವಿಸ್ತರಿಸೆ ಕುಶಲವರ್ ಕೇಳಿ ಸಂಶಯದೆ ಕೈ ।
ಮಸ್ತಕದೊಳಿಟ್ಟೆರಗಿ ಭರತನಿರ್ದಂದವಂ ಸಾಂಗದಿಂ ಬೆಸಗೊಂಡರು ॥

(೧) ವರ ತಪೋವನದಲ್ಲಿ ವಾಲ್ಮೀಕಿ ಮುನಿಪನತಿ ।
ಕರುಣದಿಂ ಶ್ರೀರಾಮನಂಗನೆಯ ಸತ್ಕರಿಸು ।
ತಿರಲೊಂದು ದಿವಸವಾನಂದದಿಂದಾ ಕುಶಲವರ್ ವಿನಯದಿಂದೆರಗುತೆ ॥
ಗುರುವೆ ನೀಂ ಕರುಣಿಸೆಮ್ಮಯ್ಯನೀಲೋಕದಲಿ ।
ಧರಣಿಪರೊಳಗ್ಗಳನೋ? ಪೆರ್ಬಲನೋ? ದುರ್ಬಲನೋ? ।
ಕುರುಹೆಂತಿರುವದೆಂದು ಪೇಳ್ವುದೆನೆ ತೊಡಗಿದಂ ಬೆಡಗಿನಿಂ ರಾಮ ಕಥೆಯ ॥

(೨) ಸುರರ ದೂರಂ ಕೇಳಿ ಮುರವೈರಿ ನರನಾಗಿ ।
ಧರಣೀಶ ದಶರಥಂಗೊಲಿದು ಕೌಸಲೆ ಗರ್ಭ ।
ಶರಧಿಯೊಳ ಪೊಕ್ಕು ರಘುರಾಮನೆಂಬಭಿಧಾನವಂ ತಳೆದು ಜನಿಸಲಾಗಿ ॥
ಭರತಾಂಕ ಕೈಕೆಯುದರದಲಿ ಲಕ್ಷ್ಮಣನು ಮೇ ।
ಣಿರದೆ ಶತ್ರುಘ್ನನು ಸುಮಿತ್ರೆಯುದರದೆ ಜನಿಸಿ ।
ಬೆರಸಿಕೊಂಡಿರುತ್ತಿರ್ದರಣ್ಣಂದಿರಂ ಬಿಡದೆ ಬಳೆವುತ್ತೆ ಲೀಲೆಯಿಂದೆ ॥

(೩) ಅನ್ನೆಗಂ ನಡೆತಂದು ಕೌಶಿಕ ಮುನೀಶ್ವರಂ ।
ಚೆನ್ನರ ಮಹಾತ್ಮ್ಯೆಯಂ ವಿಸ್ತರಿಸಿ ದಶರಥಂ ।
ಗುನ್ನತಾಮೋದವಂ ಚಿಗುರಿಸುತ್ತಾಗಳೇ ಶ್ರೀರಾಮ ಲಕ್ಷ್ಮಣರನು ॥
ತನ್ನೊಡನೆ ಕೂರ್ಮೆಯಿಂದೊಯ್ಯುತಿರೆ ಮಾರ್ಗದಲಿ ।
ಕೆನ್ನ ಘಾತಕಿ ತಾಟಕಿಯನೊರಸಿ ಪುಣ್ಯತರ ।
ಮುನ್ನತಾಶ್ರಮವನೊಳಪೊಕ್ಕು ಮಖಮಂ ಕಾಯ್ದು ರಿಪು ರಕ್ಕಸರ ಶಿಕ್ಷಿಸಿ ॥

(೪) ನಿಲ್ಲದಲ್ಲಿಂದೆ ರಾಘವ ಪೊರಟು ಮುನಿಯೊಡನೆ ।
ಕಲ್ಲೆನಿಸುತೆಡೆಗೆಟ್ಟಹಲ್ಯೆಯುರು ಶಾಪಮಂ ।
ಮೆಲ್ಲಡಿಯ ಮಹಿಮೆಯಿಂ ಪರಿಹರಿಸಿ ತೆರಳಿದಂ ಮಿಥಿಲಾಪುರಿಗೆ ಪೈಲವೆ ॥
ಬಲ್ಲಿದ ನೃಪಾಲರಂ ಭಂಗಿಸಿದ ಶಂಕರನ ।
ಬಿಲ್ಲಮುರಿದವನಿಜೆಯ ಗೆಲ್ದುಕೊಂಡಯ್ಯನೊಡ ।
ನೆಲ್ಲರಂ ಬರಿಸಿದಂ ತ್ರಿಭುವನಂ ವಿಭವದಿಂ ಪೆರ್ಚಿ ಮಿಗೆ ನಲಿವಂದದೆ ॥

(೫) ವರ ಕುಶಧ್ವಜನುದರ ಸಂಭವೆಯರನುಜರ್ಗೆ ।
ಪರುಠವಿಸಿ ಕೈಗೊಳಿಸಿ ರಾಘವಂ ಸೀತೆಯುಂ ।
ವರಸುಲಗ್ನದೊಳಂದು ಮದುವೆಯಂ ತಾನಾಗಿ ಪೊರಮಟ್ಟು ಬರುವೆಡೆಯಲಿ ॥

ಪರಶುರಾಮುಂ ತಡೆಯಲಾತನಂ ಕಡೆಗಣಿಸಿ।
ಗುರು ಹಿರಿಯರೊಗ್ಗಿನಿಂದೈದಿದಂ ಸಾಕೇತ।
ಪುರವ ಕುಂತನ್ನೆಗಂ ದಶರಥಂ ಪಟ್ಟಮಂ ಕಟ್ಟಲುದ್ಯೋಗಿಸಿದನು ॥

(೬) ಕೈಕೆಯುದಕಡ್ಡಾಗಿ ಭರತಂಗೆ ರಾಜ್ಯಮಿರ-।
ಲೀಕುಮಾರಂ ವನಕೆ ಗಮಿಸಲೆಂದರಸಗತಿ-।
ರೇಕದಿಂದಬ್ಬರಿಸಲದನೀಕ್ಷಿಸುತೆ ರಾಮು ತಮ್ಮನಂ ಜನಕಜೆಯನು।
ಜೋಕೆಯಿಂ ತನ್ನೊಡನೆ ಕರಕೊಂಡು ಪಿತನಂಘ್ರಿ।
ಕೋಕನದ ಯುಗಳಮಂ ಬೀಳ್ಕೊಂಡು ತೊಳಲಿದಂ।
ಭೀಕರಪ್ರಾಕಾರಮೆನಿಸಿರ್ಪ ಘನ ಕುಂಜರಾರಣ್ಯಗಿರಿಗಳಲ್ಲಿ ॥

(೭) ಅಬ್ಬರಿಸಿ ವಿಪಿನಾಂತರಾಳದಲಿ ರಘುರಾಮು।
ನೆಬ್ಬಿಸುತ್ತನುಜ ಸಹ ಮೃಗಗಳಂ ನೋಪುತ್ತೆ।
ಸಬ್ಬಸುಯಿಧಾನದಿಂ ಸೀತೆಯಂ ನಡಿಸುತ್ತೆ ಪೋಗುತಿಹ ಮಾರ್ಗದಲ್ಲಿ ॥
ಹೆಬ್ಬುಲಿಯು ಸದೃಶೋಪಮಾನದಿಂದಂದೊಬ್ಬ।
ಹೆಬ್ಬಲವಿರಾಧನೆಂಬಾಸುರಂ ತಡವಲಿಕೆ।
ಕೊಬ್ಬ ಮುರಿದಾತನಂ ಸೀಳ್ದೊಗೆದು ಶರಭಂಗನಾಶ್ರಮದೊಳೆಡೆಗೈದನು ॥

(೮) ಮುನಿಮುನಿಗಳಿಕ್ಕೆಯಂ ಕಂಡೆಡೆಯೊಳೊಳಪೊಗುತೆ।
ವಿನಯದಿಂದವರಧಿಕ ಭಕ್ತಿಯಂ ಕೈಗೊಳುತೆ।
ಚಿನುಮಯಂ ನರನಂತೆ ದಂಡಕಾರಣ್ಯಮಂ ಸಾರುತೆಳೆದಳಿರೆಲೆಗಳ।
ಮನೆಗಟ್ಟಿ ಕುಂಭಿನೀಸುತೆವೆರಸಿ ಲಕ್ಷ್ಮಣನೊ-।
ಡನೆ ಸರ್ವರಕ್ಷೆಯಿಂದಿರುತಿರಲ್ ಕಂಡೊಡನೆ।
ಮನುಮಥಂಗೀಡಾಗಿ ಶೂರ್ಪನಖಿಯುಂಡಲೆಯೆ ಕಳಚಿದಂ ನಾಸಿಕವನು ॥

(೯) ಅವಳ ದೂರಿಂದೊಡನೆ ತ್ರಿಶಿರಖರದೂಷಣರ್।
ಬವರಕೈತರಲವರ ಬಲವ ನಿರ್ಣಯಿಸಾಗ।
ಸವರಿ ಲಂಕೆಗೆ ಗಮಿಸಲಣ್ಣನೆಡೆಗವಳಿಗಭಯುವನಿತ್ತು ಲಂಕೇಶನು ॥
ತವಕದಿಂ ಮಾವನಂ ಮೃಗರೂಪಿನಿಂ ಸುಳಿಸಿ।
ಭುವನೇಶರಾಘವಂ ಮಾಗಧಿಯ ಸುತನಿಲ್ಲ-।
ದವಧಿಯುಲಿ ಪವಣಿಕೆಯ ಭಿಕ್ಷುಕಂ ತಾನಾಗಿ ಸೀತೆಯಂ ಕದ್ದೊಯ್ದನು ॥

(೧೦) ಮನುಜನಂತಡವಿಯಲಿ ಮಿಡುಕುತಾರಾಘವಂ।
ವನಿತೆಯಂ ಪುಡುಕುತ್ತೈತರೆ ಜಟಾಯುವ ಕಂಡು।
ಜನಕಜೆಯಿರವನರಿತು ಮುಂಡನಂ ನಿಗ್ರಹಿಸಿ ಶಬರಿಯಂ ಬೀಳ್ಕೊಟ್ಟನು ॥

ಹನುಮಂತನಂ ಕಾಣುತಾತನಂ ಪತಿಕರಿಸಿ ।
ಹಣಿದು ತಾರೇಶನಂ ರವಿಜನಂ ಕುಸ್ತರಿಸಿ ।
ಘನತೆಯಿಂ ತೆರಳಿದಂ ಕಪಿಗಳಂ ಕೂಡಿಕೊಂಡಂಬುಧಿಯ ಸಾಮೀಪ್ಯಕೆ ॥

(೧೧) ಬೆಟ್ಟದಿಂ ಕಪಿಗಳುರೆ ಸಾಗರಕೆ ಸೇತುವಂ ।
ಕಟ್ಟಲಾಕ್ಷಣದಲ್ಲಿ ದಂಡೆತ್ತಿ ರಾಘವಂ ।
ಮುಟ್ಟುತಾಲಂಕೆಯಂ ಮುತ್ತಿದಂ ಮಡುಹಿದಂ ಕುಂಭಕರ್ಣಾದಿ ಖಳರ ॥
ಸಿಟ್ಟಿಡರಿ ರಾವಣಂ ಬರೆ ಕಡೆಗೆ ತಲೆಗಳಂ ।
ಕುಟ್ಟಿದಂ ಕಾಲ್ಪಿಡಿದ ಶರಣಂಗೆ ಪಟ್ಟಮಂ ।
ಕಟ್ಟಿದಂ ಸಿಕ್ಕಿರ್ದ ಸೀತೆಯಂ ತೆಗೆದಪ್ಪಿ ಪಟ್ಟಣಕೆ ಮುಖವಾದನು ॥

(೧೨) ರಾಜರಾಜನರಥವನೇರಿ ರಾಜೋತ್ತಮಂ ।
ರಾಜಕಪಿನಾಯಕರನೊಡಗೊಂಡು ವಿಜಯದಿಂ ।
ರಾಜಮುಖಿಯೊಡನೈದೆ ಸಾರಿದಂ ಮತ್ತೆ ರತ್ನಾಕರನಸನ್ನಿಧಿಯನು ॥
ರಾಜಶೇಖರದಿವ್ಯಲಿಂಗಪ್ರತಿಷ್ಠೆಯಂ ।
ರಾಜಿಪಂತೊಡನಲ್ಲಿ ಮಾಡಿದಂ ಕಲಿಭರತ ।
ರಾಜನಂ ಮಗುಳೆಕಾಂಬುಜ್ಜುಗದೊಳೈದಿದಂ ಬಳಿಕ ಸಾಕೇತಪುರಕೆ ॥

(೧೩) ರಾಮನಂ ಕೋದಂಡಭೀಮನಂ ಲಾವಣ್ಯ ।
ಕಾಮನಂ ತ್ರೈಲೋಕ್ಯ ಸೋಮನಂ ಭಜಕ ಸು ।
ಪ್ರೇಮನಂ ವಿಜಯಸಿಸ್ಸೀಮನಂ ದನುಜ ನಿರ್ನಾಮನಂ ಶುಭನಾಮನ ॥
ನೇಮನಂಸಾಕೇತ ಗ್ರಾಮನಂ ವಾನರ ।
ಸ್ತೋಮನಂ ವ್ಯೋಮಾಗ್ರ ಶಾಮನಂ ಮುನಿಗಳಾ ।
ರಾಮನಂ ಸದ್ಗುಣ ಸು ದಾಮನಹ ಭರತನುರೆಕೂರ್ಮೆಯಿಂದಿದಿರ್ಗೊಂಡನು ॥

(೧೪) ಸಹಭವರಸೆಳೆದಪ್ಪಿವೈದಡವಿ ದಾಶರಥಿ ।
ವಹಿಲದಿಂ ಕೌಸಲೆಸುಮಿತ್ರೆ ಸಹ ಕೈಕೆಯಂ ।
ವಿಹಿತದಿಂದುಪಚರಿಸಿ ರಿಪುವಿಜಯ ವಾರ್ತೆಯಂ ಗುರುವಸಿಷ್ಠಾದಿಗಳ್ಗೆ ॥
ವಹಿಲದಿಂದುಸುರುತಾ-ಸುಗ್ರೀವ ಮುಂತಾದ ।
ಮಹಿಮರಿಂಗೌತಣವನುರೆ ರಚಿಸಿ ವಿಭವದಿಂ ।
ಸಹಭೋಜನಂಗೈದು ಪುರದಖಿಲವರ್ಣಮಂ ಮಮತೆಯೊಳ್ಮನ್ನಿಸಿದನು ॥

(೧೫) ಕುಮುದಾಪ್ತನಲ್ಲದೇಜೋರಜಾರಂ ಪೋಗಿ ।
ಕಮಲಾಪ್ತನಸ್ತಮಿಸೆ ಕಳೆಯೇರಿ ಹಿಗ್ಗುವಂ ।
ಕುಮತಿ ಕಲ್ಮಷಹೃದಯನಿವನೆಂದು ಚಂದ್ರನಂ ನಿಂದಿಸುತ್ತಂದನಿಬರು ॥

ಸಮುದಾಸ್ಪದಂ ಶುಚಿ ನಿರೋಗಿ ಮಿತ್ರಾನ್ವಯಂ।
ಸುಮತಿ ನಿರ್ಮಲಪಕ್ಷನೀರಾಮಚಂದ್ರನ್ಗೆ।
ಸಮಗೀತನೀರಾಜನಕ್ಕೆಂದು ಪಟ್ಟವಂ ಕಟ್ಟಲನುವಾಗಿರ್ದರು ॥

(೧೬) ಎಂದೆನುತವಾಲ್ಮೀಕಿ ಪೇಳ್ದನಂದನಿತರಲಿ।
ಮುಂದರಿದು ಕುಶಲವರ್ ನಗೆಮೊಗದೊಳಾಕ್ಷಣಂ।
ಸಂದಿಗಂ ಪುಟ್ಟಲಾನಂದದಿಂದೆರಗುತ್ತೆತಮತಮಗೆ ನಲ್ನುಡಿಯಲಿ ॥
ಇಂದಿದೆಂತೆಂದೆಮಗೆ ವಿಸ್ತರಿಸು ಮುನಿವರ್ಯ।
ಹಿಂದೆ ಮೇಣ್ ಪಟ್ಟವಂ ಕಟ್ಟಲಿಕೆ ದಶರಥಂ।
ನಿಂದಿರಲ್ ಕೈಕೆ ಮಿಗೆವಿಘ್ನಮಂಬಲಗೊಂಡಳೆಂದೊಮ್ಮೆಸೂಚಿಸಿದೆಲೈ ॥

(೧೭) ಕೈಕಾನಿತಂಬಿನಿಯು ಕಾನನಕ್ಕಯ್ಯನಂ।
ಏಕೆಂದು ನೂಕಿದಳ್ ನೃಪನೆಂತು ಬೀಳ್ಕೊಟ್ಟ।
ಸಾಕಾರಮಾಗಿರ್ಪತನಯನಂ ಬಿಟ್ಟಗಲಿ ಪಡೆದಾಕೆಬಿಡದಸುವನು ॥
ಏಕೆಂದು ತಡೆದಳಂದಕಟಕಟದಕ್ಕೊಪ್ಪಿ।
ಸಾಕೇತನಗರಮಂ ಭರತನೆಂತಾಳಿದಂ।
ಕಾಕುತ್ಸ್ಥನಂ ಭ್ರಮಿಸಿ ಜರೆದನೋ? ಮರೆತನೋ ತಿಳುಪೆನುತೆ ಕೈಮುಗಿದರು ॥

(೧೮) ಬಾಲಕರಬಿನ್ನಹಕೆ ವರತಪೋವಿಪಿನಮಂ।
ಕೇಲಿಸಿರ್ಪತಿತರುಚ್ಛಾಯದುರುತಿಮಿರಂ ನಿ।
ರಾಲಸದೆ ಪಜ್ಜಳಿಸಿ ಬೆಳಗುವೊಲು ವಾಲ್ಮೀಕಿ ಸೂಸುತ್ತೆ ಬೆಳ್ನಗೆಯನು ॥
ಶೀಲಸುವ್ರತೆಯಾತ್ಮಜರ್ ಲೋಕವಂದಿತರ್।
ಶೀಲಸದ್ವಿನಯ ಚಾತುರ್ಯಂಗಳಂ ಬೀರೆ।
ಕೇಳಲೇನುಂಟೆಂದು ಕೈವಾರಿಸುತ್ತೊಡನೆ ತೊಡಗಿದಂ ಮೇಲ್ಗಥೆಯನು ॥

(೧೯) ಜಾನಕಿಯ ಸಂಭವರೆ ಲಾಲಿಸಿನ್ನರಿಪುವೆಂ।
ಮಾನಸಿಧಿ ಶಕ್ರಂಗೆ ಕವರ್ಗನುಸಾರದಿಂ।
ದೂಣಯಂ ಸಂಭವಿಸಿತೇನೆಸಲಿ ಪೂರ್ವದಲಿಗೌತಮನಮುಶ್ಯಾಪವು ॥
ಪಾಣಿವಿಡಿದಸಿಯಂತಿರಲು ದಧೀಚಿಯಕೊಂದ।
ನ್ಯೂನತರಬ್ರಹ್ಮಹತ್ಯಾಪಾಪವಿನ್ನೊಂದು।
ನೂನಮೈಕರಾಭಯದೋಷದಿಂ ಬಲಗುಂದಿಕಳೆನಂದಿರುತ್ತಿರ್ದನು ॥

(೨೦) ಹತ್ತಿತಾಸಮಯದಲಿ ಖಳಚಕ್ರವರ್ತಿಗಳ।
ಮೊತ್ತಮೆತ್ತಿದ ಧಾಳಿ ಖಳ ಶಂಬರನ ಬಾಣ।
ಜೊತ್ತರಕೆ ಮುಖಭುಜರ್ ತಲೆಗುತ್ತಿ ಹಿಮ್ಮೆಟ್ಟಿದೂರಬಾವಾಗೀಶಗೆ ॥

ತೆತ್ತಿಗರದಾರಕಟ ಸುರಪತಿಗೆ ಪಂಥತ್ವ ।
ಮೆತ್ತಿಹುದನಿಶವೈದೆ ಕಾಯ್ವೊಡಿನ್ನಜನೃಪಾ- ।
ಲೋತ್ತಮನ ಸುತನಲ್ಲದಿಲ್ಲ ಬಲ್ಲಿದರೆನುತ್ತೈದಿದಂ ರವಿವಂಶನಾ ॥

(೨೧) ಗಳದೊಳೊಪ್ಪುವ ತುಲಸಿಹಾರ ಶ್ರೀವತ್ಸದಿಂ ।
ಲಲಿತಮಹ ಶಂಖರುಚಿದಶನಗಳ್ ಪೀತಾಂಬ- ।
ರಳವಟ್ಟಮಧ್ಯದಿಂ ಪದ್ಮನೇತ್ರಂಗಳಿಂ ನೃಪ ಸುದರ್ಶನಯುಕ್ತದೆ ॥
ಸಲೆ ಜೀವಕೋಟಿನಿಗಮೋದರಂ ಹರಿಯಂತೆ ।
ಬೆಳಗುತೀರ್ಣ್ದೆಸೆಗಳಂ ಸಭೆಗೆ ನಡೆತರಲೊಡನೆ ।
ಚಳಕದಿಂ ದಶರಥಂ ಕಾಣುತಂದಿದಿರೇಳ್ದು ನುತಿಸುತ್ತೆ ವಂದಿಸಿದನು ॥

(೨೨) ವಿಜಯಮಾಗಲಿ ಎನುತೆ ಪಿಡಿದೆತ್ತಿ ಮಧುಪರ್ಕ ।
ಭಜನವಿದಿತೋಕ್ತಿಯಂ ಕೈಕೊಂಡು ವಾಕ್ಪತಿಯು ।
ರಜನೀಚರಾಧಮರ ಕಜ್ಜಮಂ ತಿಳುಪಿದಂ ವಿಸ್ತರಿಸಿ ಪದ್ಧತಿಯಲಿ ॥
ಅಜಮಹಾಭೂಪತಿಯ ಪುತ್ರ ನೀಂ ಬಲ್ಲಿದಂ ।
ಕುಜನ ನುಡಿಯಲ್ತೇಳ್ ಸುರರ ರಕ್ಷಣಕ್ಕೆ ಗಡ ।
ಯಜಮಾನನೈ ಉಭಯ ಲೋಕಕ್ಕೆ ಧಿಟಮೆಂದರರದಕರಸ ನಗುತೆಂದನು ॥

(೨೩) ಸಗ್ಗಿಗರ್ಗುರೆ ನೂಕದಾಹವಂ ಮನುಜರ್ಗೆ ।
ಬಗ್ಗವದೆ? ಲೇಸೊಮ್ಮೆ ನೋಡುವೆಂ ನಿಮ್ಮಡಿಗ- ।
ಳಗ್ಗದ ಕರುಣವಿರಲು ದುರ್ಜಯಂ ಬಹುದೆ? ನಿಶ್ಚಯಮೆಂದು ಮಣಿರಥವನು ॥
ಉಗ್ಗಡಿಸುತವನಿಪಂ ತರಿಸಲಾಸುರಮಂತ್ರಿ ।
ಹಿಗ್ಗಿತಾಕ್ಷಣದಲ್ಲಿ ತೊಟ್ಟಿರ್ಪ ಕವಚಗಳ ।
ನಗ್ಗಳಿಸಿ ಜಯಿಸೆಂದು ತೆಗೆದಾತಗಿಕ್ಕಿದಂ ಪರಸುತ್ತೆ ಮಗುಳೆ ಮಗುಳೆ ॥

(೨೪) ಸುರಪುರವದೆಂತಿರಿಯೆ ತನಗದಂ ತೋರಿಸೆಂ- ।
ದರಸನಂ ಕಣ್ಗೊನೆಯೊಳೀಕ್ಷಿಸುತೆ ನಸು ನಗು- ।
ತ್ತಿರಗಲತಿವಿನಯದಿಂ ಕೈಕೆ ವಾಚಸ್ಪತಿಗೆ ತವಕದಿಂದಾಕೆ ಸಹಿತ ॥
ವರವರೂಥವನೇರಿ ಭೂಮಿಪಂ ತೆರಳಲಾ ।
ಕುರುಮಂತು ಶೀಘ್ರದಿಂ ದಾನವರ ಬಲುಭಟರ್ ।
ಬೆರಸುತ್ತೈದುತೆ ಹರಿಬದೊಡಗೆ ದಶದಿಕ್ಕುಗಳ್ ನಡುಗಲುರೆ ಸುರಲೋಕದೆ ॥

(೨೫) ಅಚ್ಚರಿಯನೇನೆಂಬೆನಾರಣದೆ ನೃಪನ ರಥ- ।
ದಚ್ಚುಡಿದು ಗಾಲಿಗಳ್ ಬೀಳುತಿರಲಾಕೈಕೆ ।
ಬೆಚ್ಚದಿರಿ ಭಳಿರೆಂದು ತೋಳ್ಗೊಟ್ಟು ನಡಿಸಿದಳ್ ಕುಂತಿಸಿದ ಶಂದನವನು ॥

ಮೆಚ್ಚಿದನದಕೆ ಮನದೆ ದಶರಥಂ ರಿಪುಗಳಂ ।
ಕೊಚ್ಚುತಾ ದಿವಿಜರಂ ಸಕಲರಂ ಸೈಪಿಟ್ಟು ।
ಉಚ್ಚವದೊಳೈದಿದನಯೋಧ್ಯೆಗುರುವಿಜಯದಿಂ ಮೂಜಗಂ ನಲಿದಾಡಲು ॥

(೨೬) ಇರುತಿರ್ದ್ದಾನೃಪನ ವಶದೊಳಂದಿನ ಮೆಚ್ಚು ।
ಧರಣಿಯದು ರಘುವರಂಗಾಗುತಿರೆ ಮಂಥರೆಯು ।
ಪುರುಡಿಸಲಿಕಾಕೈಕೆ ಭರತಂಗೆ ರಾಜ್ಯಮಿರಲಾರಣ್ಯ ರಾಮಗೆನಲು ॥
ಪಿರಿಯರಸಿ ಮಂತ್ರಿ ಗುರು ಮೊದಲಾದ ಪುರಜನರ್ ।
ಮರಳಿ ಮಾರುತ್ತರವನೀಯದೊಪ್ಪಿದರವರ್ ।
ಧರಣಿಪಂ ಬೀಳ್ಕೊಟ್ಟ ರಘುಜನಂ ಕಾನನಕೆ ಕೇಳಿರೈ ಸಂಗತಿಯನು ॥

(೨೭) ಹಂಬಲಿಸುತಣುಗರಂ ನೃಪತಿ ಶಿಥಿಲತ್ವದಿಂ- ।
ದಿಂಬುಗೊಂಡಿಹಸುಖವನುಳಿದೊಡನೆ ಸುರಪತಿಯ- ।
ರಂ ಬಯಸಿ ಸುರಗದ್ದುಗೆಯನಡರಲತಿಚಿಂತಿಸುತೆ ಸುಮಂತಂ ಲಿಖಿತವ ॥
ನಂಬಿಗೆಯ ದೂತರಿಂ ಕಳಿಸಲಾಮಾವನವ- ।
ಲಂಬನದೊಳತ್ಯಧಿಕ ಬಿಲ್ವಿದ್ಯಸಾಧನೆಗ- ।
ಳಂ ಬಿಡದೆ ಸಾಧಿಸುತ್ತಿಹ ಭರತನದನಾಲಿಸುತ್ತೈದಿದಂ ವೇಗದೆ ॥

(೨೮) ಸಾರಿದಂ ವಿಪಿನಮಂ ಪೂರ್ವಜಂ ಸ್ವರ್ಗಮಂ ।
ಸೇರಿದಂ ದಶರಥಂ ಕೈಕೆಯಿಂದರಸುತನ ।
ನೇರದಿಂ ನಿನಗೊದಗಿತೇಳೆಂದು ಮಂತ್ರೀಶ ಸೂಚಿಸಿದರತಿಶೋಕದೆ ॥
ಚೀರಿದಂ ಚಟಮುಟಿಸಿ ಕೋಪದಿಂ ಜನನಿಯಂ ।
ದೂರಿದಂ ಕೌಸಲೆಯ ಚರಣದೊಳ್ ತಲೆಯಿಕ್ಕಿ ।
ಹೋರಿಗಂ ತಾನಾಗುತನಿಚರಂ ಬೆರಸಿ ಬನಕಿರದೆ ನಡೆದಂ ಭರತನು ॥

(೨೯) ಚಿತ್ರಕೂಟದೊಳಿರ್ದ್ದ ರಘುವರಂ ಭರತ ಬಹ ।
ಚಿತ್ರಮೇನೆಂದೊಡನೆ ತಿಳಿದುಕೊಂಡಜನೃಪನ ।
ಪುತ್ರ ಕಣ್ಮುಚ್ಚಿದನೆ ಶಿವಶಿವೆಂದಳಲುತ್ತೆ ಬೆರಸಿದಂ ಮಾತೆಯರನು ॥
ಮಿತ್ರಭಾವದೊಳವರವರನೀಕ್ಷಿಸುತ್ತೆ ಸೌ- ।
ಮಿತ್ರಿಸಹತಾಪಮಂ ಪರಿಹರಿಸಿ ತಾತಂಗೆ ।
ಮಿತ್ರವಂಶೋತ್ತಮರಸಂಸ್ಕಾರವಿಧಿಯಿಂದೆ ಪೊಂದಿಸಿದನೊಂದುಗೂಡಿ ॥

(೩೦) ಮಾತೆಯರ ಮಂತ್ರಿಯ ಚತುರ್ದಶಾಬ್ದಂ ತುಂಬ- ।
ಲ್ಕೈತಹೆನೆನುತ್ತ ಪುರಿ ರಘುಜನುಪಚರಿಸುತ್ತೆ ।
ಪ್ರೀತಿಯಿಂದಾರೆ ನಿಲಿಸಲ್ಪನ್ನಿಗಂ ಭರತಾಂಕ ಕಂದಿದಾಸ್ಯಾಬ್ಜದಿಂದೆ ॥

ಮಾತಿನನುಕೂಲತೆಯು ಪೊಸತಾದುದೇನಿಂದು ।
ಚೇತನಾತ್ಮನೆ ನಿನ್ನ ಪಾದಮಂ ಬಿಟ್ಟಗಲಿ ।
ಭೂತಳವನಾಳ್ವಾತನಲ್ತೆನುತ ದುಃಖಿಸುತ ಚರಣದಲಿ ಪೊರಳಾಡುತ ॥

(೩೧) ಬಸವಳಿದ ಕೈಕೇಯನಂ ತೆಗೆದು ತಳ್ಕೈಸುತ್ತೆ ।
ದಶರಥನಭಾಷೆಯಂ ಸಲಿಸಲಾನೈತಂದೆ ।
ಘಸಣೆಬೇಡೆಳ್ಳಸಿತು ಪೇಳ್ದಂತೆ ಮಾತೆಯರ ಸತ್ಕರಿಸಿ ನಗರದಲ್ಲಿ ॥
ವಸುಧೆಯಂ ಪಾಲಿಸಲ್ನಡೆ ನುಡಿದ ಕಾಲಕ್ಕೆ ।
ಪುಸಿಯದೈತಹೆನೆನುತ ಗಲ್ಲಮಂ ಪಿಡಿಯುತಲು- ।
ಗಿಸಿ ನಕ್ಕು ರಾಘವಂ ಪದುಳಿಸಲ್ ಭರತಾಂಕ ಮತ್ತೆರಗುತಾಕ್ಷಣದಲಿ॥

(೩೨) ಲೇಸು ನಾನೈದುವೆಂ ಚಾತುರ್ದಶಾಬ್ದಕ್ಕೆ ।
ನೇಸರಾನ್ವಯಮುಖಂ ತೋರುವನಿತುಳ್ಳಡೆ ವಿ- ।
ಲಾಸದಿಂ ಸಂಪೂರ್ಣಕೂರ್ಮೆಯಿಟ್ಟೆನಗೆ ಕೊಡು ಮೆಟ್ಟುರ್ವ ಪಾದುಕೆಗಳ ॥
ಸಾಸದಿಂ ಸಂಬಿಕೊಂಡಿರ್ದಪೆಂ ನುಡಿದವಧಿ ।
ಗೋಸರಂ ಬಂದಲ್ಲಿ ಸಪ್ತಜಿಂಹಂಗೊಡನೆ ।
ಗ್ರಾಸಮಾತನು ಜೀಯ ಶಪಥವೆನಗೆಂದೆನಲು ಪಾಲಿಸಿದ ಹರಿ ಕೃಪೆಯಲಿ ॥

(೩೩) ಕೆತ್ತಿಗೆಯ ಪೊನ್ನ ನವರತ್ನಮಯ ಪಾದುಕೆಯ ।
ನೆತ್ತಿಕೊಂಡುಭಯಮಂ ನೆತ್ತಿಯಲಿ ಬಿಡದೆ ಧರಿ- ।
ಸುತ್ತೆರಗೆ ರಘುವರನಪಾದಪಂಕಜಗಳ್ಗೆ ನಸುನಗೆಯುಮೊಳೆದೋರಿತು ।
ಮತ್ತೆ ಶತ್ರುಘ್ನ ಗಜರಥಪದಾತಿಗಳೊಡನೆ ।
ಉತ್ತಮ ನಿಮಿತ್ತದಿಂ ಸತ್ಯಸಂಧಂ ಭರತ- ।
ನೊತ್ತರದೊಳಗ್ರಜನ ಬೀಳ್ಕೊಟ್ಟು ತಿರುಗಿದಂ ವಾದ್ಯಗಳ್ ಸೂಳೈಸಲು ॥

(೩೪) ವಲ್ಕಲಗಳಳವಡಿಸಿ ಜಡೆಯಾಂತು ರಾಮನುರು ।
ಶಿಲ್ಕುಗಳನೆಲ್ಲಮಂ ದಹಿಸಿ ಭಸ್ಮವನಿಟ್ಟು ।
ತುಳ್ಕುವಾಮೋದದಿಂ ಪೊತ್ತು ಗಂಗಾಮೂಲದನುಕೂಲಮಂ ಭರತನು ॥
ಫಳ್ಕಿಡುವ ವಿಮಲಾಂಘ್ರಿ ಪೋಗೆ ಸದೆಶ್ಲೇಷದಿಂ ।
ಚಳ್ಕದಿಂದೈದಿದಂ ಪ್ರತ್ಯಕ್ಷ ಶಿವನಂತೆ ।
ಪಳ್ಕುಗಳ್ ತಳ್ಕೈಡುವ ನಂದಿಸುಪ್ರವರಾಂತ ಪಟ್ಟಣಕೆ ತವಕದಿಂದೆ ।

(೩೫) ತೆರಳಿಸುತೆ ಮಾತೆಯರನತ್ತಯೋಧ್ಯಾಪುರಕೆ ।
ಮೆರಿಸಿದಂ ಬಳಿಕಿತ್ತ ರಾಮಾಂಘ್ರಿರಕ್ಷೆಯಂ ।
ಸುರುಚಿರದ ಸನ್ಮಹಾನಂದಿಯಾಗ್ರಾಮದಲಿ ವಿಭವದಿಂ ಕೈಕಾತ್ಮಜ ॥

ಕರೆಯಿಸುತೆ ಶಿಲ್ಪಿಗಳ ನವರತ್ನಮಯ ಭವನ ।
ವಿರಚಿಸುತ್ತದರಲ್ಲಿ ನವರತ್ನಮಂಟಪದೊ- ।
ಳಿರಿಸಿದಂ ಭದ್ರಸಿಂಹಾಸನವಲಂಕರಿಸಿ ರಾಮನಾಪಾದುಕೆಗಳಾ ॥

(೩೬) ಡಂಗುರವ ಪೊಯ್ಸಿದಂ ಪಾದುಕೆಗಳೇ ಜನಕೆ ।
ಮಂಗಲೋತ್ಸವಗೊಡುವ ಪ್ರತಿರಾಮನೆಂದರಿತು ।
ಪಿಂಗದೋಲಗಿಸುತುರೆ ಪಡೆವುದಿಹಪರದೆ ಸದ್ಭಕ್ತಿಯಿಂ ಮುಕ್ತಿಯನುರೆ ।
ಸಂಗಡಿಸದವರಾಸುರರ್ ರಿಪುಗಳೆಮಗೆಂಬ ।
ಸಂಗತಿಯನೆಲ್ಲರ್ಗೆ ತಿಳಿಸುತ್ತೆ ಸಕಲ ಕುಸು- ।
ಮಂಗಳಿಂದರ್ಚಿಸುತೆ ಪಾದುಕೆಗಳಂ ಭರತ ಪಾಲಿಸಿದನವನಿಯನುರೆ ॥

(೩೭) ಕುವಲಯಕೆ ಶಶಿಯಂತೆ ಬೆಳಗಿದಂ ರಿಪುಗಳ್ಗೆ ।
ಜವನಂತೆ ತೋರಿದಂ ಪೆಣ್ಣನಕೆ ಪಿತನಂತೆ ।
ತವೆತವಿಸುತೊಪ್ಪಿದಂ ಪ್ರಜೆಗಳ್ಗೆ ವೃಷಭನಂತಿರ್ದಂ ಪ್ರಜಾನಿವಹಕೆ ॥
ಶಿವನಂತೆ ಬೀರಿದಂ ದೀನರ್ಗೆ ಸುರಭಿಯಂ- ।
ತವನಿತ್ತು ಕೀರ್ತಿಪ್ರಕಾಶಕ್ಕೆ ರವಿಯಂತೆ ।
ಭುವಿಯಂತೆ ಬೆಳವಿಗೆಯ ಹಾರೈಸುತಾಳಿದಂ ಪಡಿಯುಂಟೆ ಭರತನೃಪಗೆ ॥

(೩೮) ಸುರಪತಿಯ ಭೋಗಮಂ ಧನದನೈಶ್ವರ್ಯಮಂ ।
ಪರಿಹಾಸಮಂ ಮಾಡುತಬ್ಧಿಗಾಂಭೀರ್ಯದಿಂ ।
ಭರತನಾಪಾದುಕೆಯೊಳಾಜ್ಞೆಯಂ ಬೇಡುತ್ತೆ ಕಾಣಿಕೆಗಳಂ ನೀಡುತೆ ॥
ಇರುತಿರ್ದುದೇನೆನಲಿ ಜಗವೆಲ್ಲ ಸಾಂದ್ರದಿಂ ।
ಹರಿಪದವ ಸೇವಿಸುತ್ತೆಸೆವ ನಕ್ಷತ್ರಗಳ ।
ಪರಿಯಂತೆ ಶಶಿಯಂತೆ ಭುವನದೊಳ್ ಧ್ರುವನಾಗಿ ನೃಪನಿರ್ದ ಸೇವಿಸುತ್ತೇ ॥

(೩೯) ವಿಲಸಿತದ ಹರಿಪದಂ ಜಲಭರಿತ ಕಲಶದ- ।
ಲ್ಲಲಸದೇ ಪ್ರತಿಬಿಂಬಮೆಸೆದೈದೆ ಪೊಳೆವಂತೆ ।
ಬಲಿಯ ವಿತಳಕ್ಕಟ್ಟಿ ತ್ರಿಭುವನವ ಮೆಟ್ಟಳೆದ ಹರಿಪದದ ಪಾದುಕೆಗಳು ॥
ಬಳಿಕೀಗ ಭರತಾವನೀಶ್ವರನ ಹೇಮಕೃತ- ।
ನಿಲಯಮಣಿಸಂಪುಟದೊಳಡಗಿಕೊಂಡಿರುತಿರ್ದ- ।
ವಲಘುಬಲತಾರಕಾ ಬ್ರಹ್ಮನಹ ಶ್ರೀರಾಮನುರು ಮಹಿಮೆಪೊಗಳಲಳವೆ ॥

(೪೦) ಪತಿಗಿತ್ತು ಸುರತಮಂ ಮಗುಳೆ ಮೇಲುಪರತಿಯ ।
ಗತಿಯಸಾತ್ಮ್ಯದಿ ಬಗೆದ ಜಾರಿಣಿಗೆ ಬಿಡದೊಡನೆ ।
ಜೊತೆಯಗಲಿದಂತಾಹಿನಾಂತ್ಯದಲಿ ಶಿಶಿರರ್ತು ವೃಶ್ಚಿಕಂ ವೃಶ್ಚಿಕದಲಿ ॥

ಹತನವಾದಂತೈಕಿಲಿಂದುದಿಸಿ ಮುಂದೈದು- ।
ವತಿಶಯದ ಮಧುರಾಜನಂ ನೋಳ್ಪಪೇಕ್ಷೆಯಿಂ ।
ಕ್ಷಿತಿಗೆ ಪ್ರೈದೋರ್ದುದದನೇನೆನಲಿ ಶೀತದಿಂ ವಾತವೊಗೆದೆಸೆಯುವಂತೆ ॥

(೪೧) ವನಲಕ್ಷ್ಮಿಯುರೆ ತಾನಪರ್ಣೆಯಾಗಿರೆ ಕಂಡು ।
ತನುಮನೋಲ್ಲಾಸದಿಂ ವರ ನೀಲಕಂಠನಿರೆ ।
ಮುನಿಸಿನಿಂದಾಹರಿ ಸುಪರ್ಣಸುಸ್ಮರಣೆಯಲಿ ವಿಹರಿಸಲಿಕಾಕಾಲದೆ ॥
ಕನಸಿನುತ್ಸಾಹದಂತಾಕುಳಿರ್ ತೋರ್ದುದಗು- ।
ತನವರತ ದೀನರಂತೆಸೆಯುತಿರೆ ದಿನದಿನಕೆ ।
ದಿನಪನುತ್ಕೃಷ್ಟತರ ಕಂಜಕಭಯಂಗಳಂ ಕೊಡುತಿರ್ದನಭಿಮಾನದೆ ॥

(೪೨) ಮಾಗಿಯಂ ಕಡೆಗಣಿಸಿ ಚೈತ್ರನಂ ಬಲಗೊಳುತೆ ।
ಕೋಗಿಲೆಗಳುಪಚರಿಸುತಬ್ಜಮಂ ನಿಗುಚುತ್ತೆ ।
ಸೋಗೆಯಂಪರಗೆಯ್ಸುತಳಿಗಳಂ ಕರೆಯಿಸುತೆ ಪರಸುತ್ತೆ ವೃಕ್ಷಂಗಳ ॥
ಲಾಗಸಿಂದೊಡನೊಗೆದ ಶಿಶಿರ ಋತು ಜನಮನ- ।
ಕ್ಕಾಗಳಿನಶಶಿಗಳಂ ಸಮಧಾತುವಿಂ ಬಿಡದೆ ।
ತೂಗಿ ಮಿಗೆ ತೋರುತ್ತೆ ನೆಲೆಗೊಳಲ್ ಮರುಗಿದಂ ಭರತಾಂಕ ನೆನೆದಣ್ಣನ ॥

(೪೩) ಪಲ್ಲವಕೆ ಸದೃಶಮಹ ಮೆಲ್ಲಡಿಗಳಡಿಗನಿಶ ।
ಚಲ್ಲಿದೈಕಿಲ್ಗಣಗಳಂ ತಾಳ್ದ ಪುಲ್ಮೊಗ್ಗೆ- ।
ಳೆಲ್ಲಮಂ ಮಿಗೆ ತುಳಿವುತುರು ಬ್ರಾಹ್ಮಿಯುಲಿ ಜನಕಜಾತೆ ಸೌಮಿತ್ರಿಯೊಡನೆ ॥
ಕಲ್ಲು ಸಿಡಿವಾತಪದ ಮಧ್ಯಾಹ್ನದಲ್ಲೆಂತು ।
ಸಲ್ಲಲಿತ ಬೊಬ್ಬೂರ ರಾಘವೇಶ್ವರನೈದಿ ।
ತಲ್ಲಣಿಸುತಿರ್ದಪನೊ ಕಾಡಿನಲ್ಲೆನುತಳ್ಕಿ ಭರತಾಂಕ ಬಿಸುಸುಯ್ದನು ॥

* (೪೪) ಧರಣಿಯುಲಿ ಬೊಬ್ಬೂರ ರಂಗಪ್ಪನೆಂಬ ಕವಿ ।
ವರ ರಚಿಸಿದೀಪರಶುರಾಮರಾಮಾಯಣದೆ ।
ಮೆರೆವವೇದಾಮ್ನಾಯ ಪರಿಮಿತಿಯ ಪದ್ಯಂಗಳಿಹ ದಿತೀಯೋಧ್ಯಾಯಮಾ ॥
ವರ ಭರದ್ವಾಜಾಂಗಿರಸ ಗೋತ್ರ ಜಾತ ಭೂ - ।
ಸುರ ಕಡೇಕೋಡಿ ವೆಂಕಪ್ಪ ಹೆಗ್ಗಡೆಯ ಮಗ ।
ಪರಮಯ್ಯನವನಣುಗ ವೆಂಕಪ್ಪ ತಿದ್ದಿದಂ ಶ್ರೀನಿವಾಸನ ದಯದಲಿ ॥

ಅಂತು ಅಧ್ಯಾಯ ೨ ಕ್ಕೆ ಪದ್ಯ ೭೬ ಕ್ಕೆ ಮಂಗಳಮಸ್ತು ।

# ೩ ನೆಯ ಅಧ್ಯಾಯ.

ಸೂಚನೆ ॥ ನಾರದಮುನೀಶ್ವರಂ ಭರತಶತ್ರುಘ್ನರ್ಗೆ ।
ಸೇರಿದುರುಚಿಂತೆಯಂ ಬಿಡಿಸಲತಿದಯದೆ ವ್ಯ- ।
ದೋರಿ ಪೇಳ್ದಂ ಕಾರ್ತವೀರ್ಯಾರ್ಜುನಂ ಜನಿಸಿದಾಕಥೆಯ ಬೆಸಗೊಳಲಿಕೆ ।

(೧) ಅವಧರಿಸಿರೈ ಸೀತೆಯಣುಗರೇ ಕೈಕೇಯ- ।
ನವನಿಯಂ ಧರ್ಮದಿಂದಾಳುತಿರಲೀಪರಿಯ ।
ಪವಣಿಕೆಯೊಳಗ್ರಜನ ಪಾದುಕಾದ್ವಯುವನೋಲೈಸುತನುಜಾತನೊಡನೆ ।
ಧ್ರುವದೆ ನಂದೀಗ್ರಾಮದಲಿ ನಿತ್ಯ ಜಾನಿಸು- ।
ತ್ತವಿರಲ ಸುಬೋಧಕರ ಮೇಳದಿಂದಿರುತಿರಲು ।
ತವೆ ತವಿಸಿ ಮತ್ತೊಂದು ಶುಭದಿವಸ ರವಿಯಂತೆ ನಾರದಂ ಮೈದೋರ್ದನು ॥

(೨) ಹಸ್ತದಲಿ ಶೋಭಿಪಾವಲ್ಲಕಿಯ ಸುಸ್ವರಗ- ।
ಭಸ್ತಿಯಿಂದಾನಂದರಸಮುಣ್ಮುತೊಳಗುರೆ ವ್ಯ- ।
ವಸ್ಥೆಯಿಂದಂಬುಜಶ್ಯಾಮನಹ ರಾಮನಂ ಕೀರ್ತಿಸುತೆ ಕುಶಲತ್ವದೆ ॥
ಮಸ್ತಕದ ಕೆಂಜೆಡೆಯ ಮಕುಟದಿಂದಮರಮುನಿ ।
ಪುಸ್ತವಿಸುತಂಚೆಯಂ ಪತ್ತಿಬರಲಂದುರೆ ಸ- ।
ಮಸ್ತರುಂ ಕೈಮುಗಿದು ನಿಂದರೊಡನೆಡಬಲದೆ ಸಭೆಯಲ್ಲಿ ಭರತನೃಪನ ॥

(೩) ಕಣ್ಣಲರ್ ನಲವೇರೆ ಮೈರೋಮಗಳ್ ನಿಗುರೆ ।
ಸಣ್ಣ ನಗೆ ಮೊಳೆದೋರೆ ಗೋಣಾರೆ ಭಕ್ತಿರಸ- ।
ತಿಣ್ಣದಿಂ ತಮ್ಮಸಹ ಭರತನೃಪ ಸಂಪನ್ನ ಮುನಿರನ್ನನಡಿಗೆರಗಲು ॥
ಮುನ್ನುಡಿಯೊಳುರೆ ಪರಸಲಾತನಂ ನವರತ್ನ- ।
ದುನ್ನತದಪೀಠದಲಿ ಕುಳ್ಳಿರಿಸುತಾ ನೃಪಂ ।
ಮನ್ನಣೆಯೊಳರ್ಘ್ಯವಿತ್ತಗ್ರಜಂ ತನಗಿಂದು ಬಂದವೋಲಾಯ್ತೆನ್ನಲು ॥

(೪) ಬಾಯಬೂಟಕನುಡಿಯನೆಲ್ಲಿ ಕಲಿತೆಯೊ? ಭರತ ।
ರಾಯರಾಮನನಟ್ಟಿ ರಾಜ್ಯಕೊಡೆಯನಾದೆ ;
ದಾಯಗನ ಮೋರೆಯಂ ಕಂಡರೆಂತಪ್ಪುದೈ ಮನಸಿಗತ್ಯಾನಂದವು ॥
ಆಯಿತೆಲ್ಲಿಯ ಚೇಷ್ಟೆ ತಾತನಾರ್ ಜಾತನಾರ್ ।
ಕಾಯಸುಖಮಂ ನೋಳ್ಪರಾರೆಲ್ಲಿ ಪಮೆದರೇಂ ।
ಮಾಯೆಯಿಲ್ಲದರುಂಟೆ? ನಿನ್ನ ಪಾಡೇನಣುಗ ಕೇಳೆಂದು ಮುನಿ ನಕ್ಕನು ॥

(೫) ಘಕ್ಕನಾಮುನಿನುಡಿಯನಾಲಿಸಿ ಭರತ ಮನದೆ ।
ಪಕ್ಕೆಲುಬಿನಲಿ ಕೋಲುಗಿದ ಹರಿಣನೋಲ್ ಮಿಡುಕು- ।
ತಕ್ಕರುರೆ ಕುಡಿವರಿದು ರಾಮನಂ ಸೀತೆಯಂ ಸೌಮಿತ್ರಿಯಂ ಧ್ಯಾನಿಸೀ ॥

ಉಕ್ಕುತಿಹ ನಯನಾಂಬುಧಾರೆಗಳನೊರಸುತ್ತೆ ।
ಬಿಕ್ಕಿಬಿಕ್ಕಳುತೆ ಮುನ್ನಾವ ಜನ್ಮದ ಪಗೆಯೊ ? ।
ರಕ್ಷಿಸಂ ತಾನಾದೆ ಶಿವಶಿವೆಂದಳಲಿದಂ ಬಹಳ ಪಶ್ಚಾತ್ತಾಪದೆ ॥

(೬) ಆವ ಜನ್ಮಾಂತರದ ಪಗೆಯುದೆಂಬಂ ಪಿಂತೆ ।
ಸಾವಿರ ಸುಬಾಹುವಂ ಪೊತ್ತೊಡನೆ ಸತ್ವದಿಂ ।
ಭೂವಲಯದಲ್ಲುದಿಸಿ ಹರಿಯೊಡನೆ ಕಾದುತ್ತೆ ಮಡಿದುವಂ ಜಗವರಿಯದೆ ॥
ನಾವು ಕಂಡುದ ಮಾಜಲರಿಯೆವೆಲೆ ಶತ್ರುಘ್ನ ।
ನೀನೆರಡನೆಯ ಜನ್ಮನಾಂತಿಹುದರಿಂದೀಗ- ।
ಳಾವರಿಸಿಕೊಂಡಿಹುದು ಮರವು ನಿಮಗೆನಲಾಗಿ ಭರತಾಂಕ ಬೆರಗಾಗುತೆ ॥

(೭) ಭರದಿಂದೆ ಮುನಿವರನೆ ಪೂರ್ವಜನ್ಮದೊಳಾವ ।
ದುರುಳಖಳನಾನಾವ ಪ್ರವರವೇನಗರಿಪೆನಲ್ ।
ದುರುಳಖಳನಲ್ತು ನೀಂ ಕಾರ್ತವೀರ್ಯಾರ್ಜುನಂ ಸೋಮಕುಲಸಂಜಾತನು ॥
ಪರಮ ಋಷಿ ಜಮದಗ್ನಿ ಸುತನಾಗಿ ರಾಘವಂ ।
ಪರಶುರಾಮಾಖ್ಯದಿಂ ಕೊಂದನಂದಿಗೆ ಮಗನೆ ।
ಪರನಲ್ಲ ಸಾಕ್ಷಾತ್ ಸುದರ್ಶನಂ ನೀಂ ಕೇಳವಂ ಪರಮ ವೈಕುಂಠನು ॥

(೮) ಎಂದ ಮಾತಿಗೆ ಮತ್ತೆ ಭರತ ನಸುನಗುತೆಂದ ।
ಪಿಂದೆ ವೈಕುಂಠನೊಡನಾವ ಕಜ್ಜ ನಿಮಿತ್ತ- ।
ದಿಂದೆನಗೆ ವೈರತ್ವಮುಂಟಾಯಿತದು ಪಿಂಗದಿಹುದೆ ಪೂರ್ವದ ಜನ್ಮದೆ ॥
ಮುಂದೊದಗುವುದೆ ಜೀಯ ನಂಜು ನಿಶ್ಶೇಷಮುಂ ।
ಪೊಂದಿಪಾ ಪುಣ್ಯದಿತಿಹಾಸವೊಂದುಂಟೆ ? ಎನೆ ।
ಕಂದ ಬೇರಿನ್ನಿಲ್ಲ ಮಗುಚಿದಂ ಕೇಳಿದರೆ ಪೂರ್ವಮುಂ ಪರಿಹರಿಪುದು ।

(೯) ಬಂದಪಂ ರಘುವರಂ ವಿಜಯಪರನಾಗಿ ನೀ- ।
ನೆಂದಿನಂದದೆ ಹರಿಯ ಹಸ್ತಪದ್ಮದೆ ನಿಲುವೆ ।
ಹಿಂದುಮುಂದಣ ವಿರಸ ಸರಸ ಪರಿಹಾಸಕಮುದಾಗಿ ಬಳಿಕುರೆ ಪೋಪುದು ॥
ಸಂದಿಗವಿದಕ್ಕಿಲ್ಲ ಸುಕುಮಾರ ಕೇಳೆನಲು ।
ಮುಂದರಿದು ಭರತ ಮಂದಸ್ಮಿತಾನನನಾಗಿ ।
ತಂದೆ ಕರುಣಿಪುದೆನಗೆ ಪೂರ್ವಚಾರಿತ್ರಮುಂ ಕೃಪೆಯೊಳೆನಲಿಂತೆಂದನು ॥

(೧೦) ಆದರೆಲೆ ಭರತಶತ್ರುಘ್ನರೇ ಕೇಳಿ ಬಳಿ- ।
ಕಾದಿಯುಲಿ ವೈಕುಂಠಮಂದಿರದೊಳುಜ್ವಲದೆ ।
ಶ್ರೀಧರಂ ಫಣಿತಲ್ಪದಲಿ ಮಲಗಿ ಏಗೆ ಮೆರೆಯೆ ಲೀಲಾವಿನೋದದಿಂದೆ ॥

ವೇದಶಾಸ್ತ್ರಗಳಮಿತ ಮಂತ್ರಾದಿ ದೇವರ್ಕ- ।
ಳಾದಿಭೌತಿಕನಿಕರ ಭೋಗಿನಿಯರಾಶ್ರಯಿಸಿ ।
ಕಾದುಕೊಂಡಿರುತಿರ್ದರೇನೆನಲಿ ಕರಕಮಲಕೋರಕಗಳಿಂ ಧ್ಯಾನಿಸಿ ॥

(೧೧) ರುದ್ರಕಮಲಾಸನರ್ ಕೋಟಿ ಮನುಮುನಿ ನಿವಹ- ।
ವದ್ರಿರಿಪುಹಸ್ತಾಂಕಿತರ್ ಕೋಟಿ ಸುರಸಂಖ್ಯೆ ।
ಭದ್ರಮಯ ಸಾಲೋಕ್ಯ ಸಾರೂಪ್ಯ ಸಾಮೀಪ್ಯ ಸಾಯುಜ್ಯ ಪದವಿವಡೆದ ॥
ಮುದ್ರೆಚಕ್ರಾಂಕಿತರ್ ಕೋಟಿ ರವಿಶಶಿಲಕ್ಷ ।
ಸಧ್ರುವಾಂತಃಕರಣ ಸಾರಹೃದಯರ್ ಕೋಟಿ ।
ವಿದ್ರುಮಾಧರಕಲಿತಲಕ್ಷ್ಮೀಶನಿದಿರಿನಲಿ ನಿಂದಿರ್ದರೋಲೈಸುತೆ ॥

(೧೨) ಸಿರಿಯು ವಿಮಲಾಸ್ಯದಲಿ ರಾಜೀವಲೋಚನದ ।
ಕಿರಣಮಂ ಪಸರಿಸುತ್ತೊಮ್ಮೊಮ್ಮೆ ವಕ್ಷೋಜ- ।
ದಿರುಬಿನಲಿ ರಂಜಿಪಾನಾಯಕಸುರತ್ನದಲಿ ತನ್ನಮುಖಲಾವಣ್ಯವ ॥
ನಿರುತವೀಕ್ಷಿಸುತುರೆ ಮುಗುಳ್ನಗೆಯು ಮಿಂಚಿನಿಂ ।
ಹರಿ ವಿರಾಜಿಸೆ ಹರಿಯ ಮಕುಟಮಣಿಗಣಗಳಲಿ ।
ತರತರದೆ ರಂಜಿಸಲು ತನ್ನಯ ಕಳೇವರಂ ಹಿಗ್ಗಿದಳ್ ಶ್ರೀದೇವಿಯು ॥

(೧೩) ಶ್ರುತಿಕೋಟಿಗತಿದೂರವಾಗಿ ತೋರ್ಪಾಹರಿಯು ।
ಪತಿಯಾಗಿ ಸಿಲುಕಿಪ್ಪುದೆನ್ನ ಸುಕೃತಫಲವಲ್ತೆ ।
ಪ್ರತಿವೆಣ್ಗಳಿಲ್ಲವಾನಲ್ತೆ ಮಕುಟದೊಳನಿಶಮುರೆ ತೊಳಗಿ ಮಿಗೆ ಬೆಳಗುವಾ ॥
ಅತಿಶಯದ ಶ್ರೀರತ್ನ ನವರತ್ನದಲಿ ಕೂಡೆ ।
ಶತಪತ್ರಲೋಚನಂ ದಶರತ್ನಮಂ ಬಯಸಿ ।
ಸತತ ಪೊತ್ತಿಹನೆಂದು ಚಿತ್ತದಲಿ ನೆರೆ ತಿಳಿದು ಶ್ರೀದೇವಿ ನಸುನಕ್ಕಳು ॥

(೧೪) ಸಿರಿಯು ಸುಸ್ಮೇರದಿರವರಿತು ತನ್ನಲ್ಲಿ ಮಿಗೆ ।
ವರ ಸುದರ್ಶನಮಾಗ ಹರಿಯಕರದಲಿ ನಲಿದು ।
ನೆರೆ ಸಭಾಸ್ಥಾನದೊಳ್ ಪ್ರಕಟಮಂ ಮಾಡಿತಂದೆಲೆ ಜನನಿ ನೀಂ ಗೋಪ್ಯದೆ ॥
ಹರುಷಗೊಂಡಪೆಯೇಕೆ ನಿನಗಿಂತಧಿಕನಲ್ತು ।
ಪರಿಕಿಸಲು ವೈಕುಂಠಗೈಶ್ವರ್ಯ ಸಾಹಸಂ ।
ದೊರೆತೊಪ್ಪುತಿಹುದಾರ ದೆಶೆಯಿಂದೆ ನಿನ್ನಿಂದೆ ಕೇಳ್ ವಿಲಸಿತಸುಮಂಗಳೆ ॥

(೧೫) ಎಂದಮಾತಂ ಲಾಲಿಸುತ್ತೊಡನೆ ಮಾಲಕುಮಿ ।
ಕುಂದದೆಳೆನಗೆಮೊಗದಲುತ್ಪಲಸುನೇತ್ರದಿಂ- ।
ದಂದು ಮಾರನ ಪಿತನನೀಕ್ಷಿಸಿದಾಕ್ಷಣದೆ ಪರಮಾತ್ಮನಿಂತೆಂದನು ।

ಮಂದರಾದ್ರಿಯನೆಸಗಿ ಕಡೆಗೋಲನುರೆ ಕಡೆದು ।
ಸಿಂಧುವಿನ ಮಧ್ಯದಿಂ ನಿನ್ನ ತೆಗೆದವರದಾರ್ ।
ಕೊಂದು ದನುಜರ್ಕಳಂ ದಿವಿಜರ್ಗಮೃತವನಿತ್ತುಳುಹಿದವರಾರ್ ಪೂರ್ವದೆ ॥

(೧೬) ಎನುತಂಬುಜಾಂಬಕಂ ಸುಸ್ಮೇರದುಕ್ತಿಯಿಂ ।
ದಿನೆಯಳಂ ಲಜ್ಜಿಸಲ್ ಕೊನರಿ ಕೋಪದಿನಾಗ ।
ಘನಸುದರ್ಶನವೆಂದುದಾರಿಂದೆ ದೈತ್ಯರಂ ಗೆಲ್ದು ನೀಂ ಪೂಜ್ಯನಾದೈ ॥
ಮನದೊಳದನುರೆ ತಿಳಿದು ಮಾತನಾಡೆಲೆ ದೇವ ।
ನಿನಗೆ ನೀಂ ಕೈವಾರತನವಾಂತು ಪಡಗರದೆ ।
ಬಿನದದಿಂದುಗ್ಗಡಿಸಿಕೊಂಡರಲ್ಲೇನುಂಟು ನೆನೆ ಪೂರ್ವಜನ್ಮಂಗಳ ॥

(೧೭) ಮಚ್ಛಕೂರ್ಮವರಾಹ ರೂಪಂಗಳಂದು ನಿ- ।
ನ್ನಿಚ್ಛೆಯಿಂದೆನ್ನನುಳಿದೈದಲೊಡನುಂಟಾಯ್ತು ।
ಕೊಚ್ಚಿಪಚ್ಚಡಿಗೆಯ್ವೆ ತಾನಿರ್ದರಸುರರಂ ಬಹುಜನ್ಮಪಡೆಗೊಂಬವೆ ॥
ಅಚ್ಚುತಪ್ರವರಮಾಗಂದದೇಂ ನಿಷ್ಠುರಂ ।
ರಚ್ಚಿನಿಂ ಕನಕಾಂಗನುರುರಕ್ತಮಂ ಕುಡಿಯೆ ।
ಹುಚ್ಚು ಪರಿವೇಷ್ಟಿಸಿತು ಜಾಣತನವಳಿದೊಡನೆ ತಿರ್ಯಕ್ಯಮಾಗವಾದೆಲಾ ॥

(೧೮) ವಾಮನಾಕೃತಿಯನಾಂತೊಡನೆ ಬಲಿಖಳನಲ್ಲಿ ।
ಭೂಮಿಯಂ ನೀಂ ತಿರಿದೆ ತಿರಿದಬಳಿಕಿನ್ನಾವ ।
ಗೋಮಿನೀಪತಿ ಚಕ್ರಪಾಣಿ ಗಡ ತಿರುಕರ್ಳ್ ದಶದೆ ನೀನೇಕಾದಶ ॥
ಸ್ವಾಮಿಯೆನಗಲ್ತೆನುತೆ ಜರೆಯುಲದನಾಲಿಸುತೆ ।
ತಾಮರಸಲೋಚನಂ ಖತಿವಸಗಿ ಮಗುಳೆಂದ ।
ತಾಮಸೀಚರರನುರೆ ನಿನ್ನಭುಜಸತ್ವದಿಂದಿನ್ನೊದಗಿ ಸವರಿನ್ನುತೆ ॥

(೧೯) ಭವದೀಯದರ್ಶನಂ ಮತ್ಸಮಲಲೋಚನಕೆ ।
ನವ ಸುದರ್ಶನವೆನ್ನುತೆಸಗಿರ್ದನೀಗ ನೀಂ ।
ಭವಬಂಧಕೊಳಗಾದೆ ದೂಷಿಕಂ ಸಿದ್ಧಾಂತಮಿನ್ನದರ್ಶನವದೆಮಗೆ ॥
ಶಿವಭಕ್ತಿಯುಕ್ತದಿಂ ಭುಜಸಹಸ್ರವನಾಂತು ।
ಭುವಿಯೊಳುದ್ಭವಿಸಿನ್ನು ವಿಪ್ರಋಷಿವಂಶದಿಂ ।
ದವತರಿಸಿ ನಿನ್ನನಾಂ ಕೆಣಕುವೆಂ ಬ್ರಹ್ಮಚರ್ಯವ್ರತದೆ ಪಸನೆವದಲಿ ॥

(೨೦) ಎನ್ನ ನಿನ್ನುತ್ಕೃಷ್ಟ ಸಾಹಸವನಂದನ್ಯ- ।
ರಿನ್ನು ಬಿಡದುರೆ ಪೇಳ್ವರೆಲೆ ಚಕ್ರ ಭೂಚಕ್ರ- ।
ಖುನ್ನತಿಯನೃಪನಾಗಿ ಜನಿಸು ನಡೆ ಪೋಗೆನುತ ಕಮಲಾಕ್ಷನತಿಕೋಪದೆ ॥

ಮುನ್ನದಂ ಬಿಸುಡಲತಿಮಸಗಿದುನ್ಮತ್ತದಿಂ ।
ಬಿನ್ನಪವನೆಸಗಲೆಳಸದೆ ಮಗುಳದಂತರಿಸ- ।
ದುನ್ನತಪ್ರಭೆಗುಂದದಾದಿಲಕ್ಷ್ಮಿಗೆ ನಮಿಸಿ ಚಕ್ರ ಮತ್ತಿಂತೆಂದುದು ॥

(೨೧) ಗಂಡಹೆಂಡರ ಕೂರ್ಮೆಗಲಹದಿಂದವಗಡೆಯು ।
ಪಿಂಡಕೊದಗಿದ ಗಾದೆಯಂತಾಯ್ತು ಕೇಳ್ ಜನನಿ ।
ಕಂಡು ಮುನಿದಪೆನ್ನೈತರಲಿ ಜನಿಪೆನೆನ್ನಘಟನರಿಯಲಿಳೆ ನಿನ್ನ ದಯದ ।
ಬಂಡವಾಲೊಂದಧಿಕವಾಗಿರಲಿ ಹೊರಿಸುವೆಂ ।
ಹುಂಡಿಯಂ ನಿನ್ನಾತನಾನೆನುತ ಪದಕೆರಗಿ ।
ಕೊಂಡು ಸಿರಿಯಭಯಮಂ ಬೀಳ್ಕೊಂಡು ಭೂತಳಕೆ ಚಕ್ರ ಬಿಜಯಂಗೆಯ್ದುದು॥

(೨೨) ತೈಲಮಂ ತ್ಯಜಿಸಿ ಮಿಗೆ ದೀಪಮುಜ್ಜ್ವಳಿಪುದೇಂ ।
ಬಾಲತನದೆಳೆಬುದ್ಧಿ ಸಮನಿಸಿತು ಚಕ್ರಕ್ಕೆ ।
ಕಾಲಗತಿಯೆನ್ನುತಾಬ್ರಹ್ಮರುದ್ರಾದಿಗಳ್ ಗೀರ್ವಾಣತತಿ ಯತಿಗಳು ॥
ಮೌಳಿಕರಸಂಪುಟದೆ ನುತಿಸುತ್ತೆ ದೇವನಂ ।
ಸಾಲ್ಗೊಂಡಿರ್ದರದನೇನೆನಲಿ ತಮತಮಗೆ ।
ನೀಲದಿಂ ತೃಣಪೂಜ್ಯ ಗುರುನಿಂದ್ಯ ದೋಷದಿಂ ಸಾಯುಜ್ಯ ಪಗೆಯಾದುದು ॥

(೨೩) ಭರತ ಕ್ಷೋಣೀಶ ಕೇಳ್ ಬಳಿಕತ್ತ ಪೂರ್ವದಲಿ ।
ವರ ಮೃಗಾಂಕಂಗುದಿಸಿ ಬುಧನಿರಲು ಬುಧನಿಂದೆ ।
ಧರೆಯೊಳುದ್ಭವಿಸಿದಂ ಬುಧ್ಯಜಲನೆಂಬವಂ ನೀತಿಯುತ ಗುಣಸಾಂದ್ರನು ॥
ಮರಳಿ ಮುಂದಾತಂಗೆ ಜನಿಸಿದಂ ಹೇಹಯಂ ।
ಧರಣಿಪರೊಳಗ್ಗಳದ ಬಲವಂತನೆನಿಸುತೀ- ।
ಧರೆಯನಾಳುತ್ತಿರಲು ಬಳಿಕಾತಗುದಿಸಿದಂ ಕೃತುವೀರ್ಯ ನೃಪವರ್ಯನು ॥

(೨೪) ದೃಢಭಕ್ತಿಯುಕ್ತದಿಂದೆಸಗುತಿಹ ಮಖದಿಂದೆ ।
ದೃಢಸತ್ಯನುಡಿಗಳಿಂ ಸಡಗರದ ಪ್ರಜೆಗಳಿಂ ।
ದೆಡೆಬಿಡದೆ ರಂಜಿಪಾಭೂಮಿಯಿಂ ಗ್ರಾಮದಿಂ ಸೀಮೆಯಾರಾಮದಿಂದೆ ॥
ದುಡುಮಿಡುವ ಕೆರೆಗಳಿಂ ನಿಡುಗಾಲ್ವೆತೊರೆಗಳಿಂ- ।
ದಿಡಿಕಿರಿದ ಬೆಳಸಿನಿಂ ತೊಡರೆಸೆವ ಪುಳಿನದಿಂ ।
ಪೊಡವಿಪನ ರಾಷ್ಟ್ರಮುರೆ ಗುಂಪಿನಿಂ ತಂಪಿನಿಂ ಪೆಂಪಿನಿಂದೊಪ್ಪುತಿಹುದು ॥

(೨೫) ಕೊಲೆಯಿಲ್ಲ ಪಗಡೆಯಾಟಗಳ ಹೊರತೆಲ್ಲಿಯುಂ ।
ಕಳೆಯೆಂಬ ನುಡಿಯಿಲ್ಲ ರಸಪಂಕಗಳನುಳಿದು ।
ಹಲವು ಭಂಗಗಳಿಲ್ಲ ಪದ್ಮಮಯ ಕಾಸಾರಗಳೊಳಲ್ಲದಾಪೆಡೆಯಲಿ ।

ತಿಳಿಯೆ ಪಾದರಿ ವಂಶ ಕಂಟಕಾವಳಿಯಿಲ್ಲ ।
ಲಲಿತರಮ್ಯೋದ್ಯಾನಗಳೊಳಲ್ಲದನ್ಯತ್ರ- ।
ಮೆಲೆನೃಪತಿ ಧರ್ಮದಿಂ ಕ್ರತುವೀರ್ಯನಿರುತಿರ್ದ ಮಾಹೀಷ್ಮತೀನಗರದೆ ॥

(೨೬) ತಂತುಗಳನೆಳೆಯೆಂಬರಾರಡಿಯುನಳಿಯೆಂಬ- ।
ರಂತೆ ಶಿಲೆಗಳಸಾಲನರೆಯೆಂಬರುರುಮಳಲ ।
ಪಂತಿಯಂ ಪುಡಿಯೆಂಬರಾನೆಯಂ ಕರಿಯೆಂಬರೆಕ್ಕಡವಮೆಟ್ಟೆಂಬರು ॥
ಕಾಂತಿಯಂ ಕಳೆಯೆಂಬರೊಡಲನುರಿ ಪೊಡೆಯೆಂಬ- ।
ರಂತಕಾರಿಯು ಘೋರನೆಂಬರವರಲ್ಲದತಿ- ।
ಚಿಂತೆ ಸಂತಾಪದಿಂದೀಪುರಿಯೊಳೋರ್ವರುಂ ಭಂಗಿಪಾನುಡಿಯಿಲ್ಲವು ॥

(೨೭) ಮಿಥ್ಯಾಪವಾದಂಗಳಿಲ್ಲದಾಮೋದದಿಂ ।
ಸತ್ಯಾಚರಣೆಯಿಂದನಿಶಮಾಳ್ವಭೂಪಂಗೆ ।
ಮತ್ಯಾತರಿಂದೆಳ್ಳಿನಷ್ಟೂಣಯುವದಿಲ್ಲ ಸುತಮಾತ್ರ ಮಿಗೆ ಶೂನ್ಯನು ॥
ಗತ್ಯಂತರವನರಸಿ ಕಾಣದಿಹನೆಂಬುದಂ ।
ನಿತ್ಯಾತ್ಮಸಂಜ್ಞೆಯಿಂದರಿತಾಗಳೈದಲಾಂ ।
ಪ್ರತ್ಯಕ್ಷ ದಿವಿಜೇಂದ್ರನೆಂಬಂತೆ ರಾಜೇಂದ್ರನಡಿಗೆರಗಲೈತಂದನು ॥

(೨೮) ಅಂಜಿದಂತವನಾಗಿ ಹಿಮ್ಮೆಟ್ಟುತಾನವಗೆ ।
ಬಂಜಗಂ ನೀನರಸ ಮುಟ್ಟದಿರ್ ವಂದನೆಯ ।
ಜಂಜಡಮದೇನಿದೊರ್ಡೆಮಗೆ ಸಂದುದು ಸಾಕು ದೂರದಲಿ ನಿಲ್ಲೆನ್ನಲು ॥
ನಂಜನುಂಡವನಂತೆ ಕಳವಳಿಸಿ ಮಖವೀರ್ಯ ।
ಸಂಜೆದಾವರೆಯಂತೆ ಮುಸುಡನುರೆ ಮುಸುಳಿಸುತೆ ।
ಮುಂಜೆರಗ ನೆನೆಯಿಸುತೆ ನಯನಾಂಬುಧಾರೆಯಿಂ ಮಿಗೆ ಮೌನದಿಂ ನಿಂದನು ॥

(೨೯) ಒಡಲೊಳಿಹ ಕೂರ್ಮೆಯಿಂದಾನ್ಯೆದೆ ಬಾಯುಳ್ಳಿ ।
ಘುಡುಘುಡಿಸಿ ಗರ್ಜಿಸಲ್ ಕಂಗೆಟ್ಟು ನೃಪನುಡುಗಿ ।
ನುಡಿದ ಕಿಂಚಿತ್ರವದೆ ಕೈಗಳಂ ಮಿಗೆ ಮುಗಿದು ವಂಶಕ್ಕೆ ಕಡೆಯಾದೆನು ॥
ಮೃಡನು ನೀನೆರಡನೆಯ ಸರ್ವಜ್ಞ ಪರಹಿತನು ।
ಕಡೆಹಾಯಿಸತಿದಯಡೆ ಮತಿಗೆಟ್ಟಮನುಜನಾಂ ।
ಪುಡುಸುಡೆನ್ನಘವ ನಿನ್ನಡಿಗೆನ್ನ ಮಸ್ತಕಂ ಧ್ರುವದೊಳೀಡಾಗಿರ್ಪುದು ॥

(೩೦) ಎಂದು ಕಡುಕಾರ್ಪಣ್ಯದುಕ್ತಿಯಿಂ ಗದ್ಗದಿಸಿ ।
ನಿಂದು ಮಿಡುಕುವ ನೃಪನ ಭಾವವಂ ನಿಟ್ಟಿಸುತೆ ।
ಕಂದತೆನ್ನಾನನಂ ಸೆಳೆದು ಬಿಗಿಯಪ್ಪುತಾಂ ಮೇಲ್ಪಾರನು ನೊಸಹದಿಂದೆ ॥

ಕಂದ ಬಿಡು ಚಿಂತೆಯಂ ನೀಂ ದೈವಶೂನ್ಯನೇ-।
ನಿಂದುಃಧರನಂ ಭಜಿಸು ಕೃಪೆಗೆಯ್ವ ಮಗನಂ ಪು-।
ರಂದರಗೆ ಕೇಳ್ದರಿಯ ಮನದೀಪ್ಸಿತವನಿತ್ತುದೇ ಸಾಕ್ಷಿಯಿದಕೆನ್ನುತೆ ॥

(೩೧) ಸಂತವಿಸಿ ಭೂಪನಂ ಸೇವೆ ಸತ್ಕಾರಮಂ।
ನಿಂತು ಕೈಕೊಂಡಲ್ಲಿ ಜಿಗಿದೆನಾಂ ಸುರಪುರಕೆ।
ಚಿಂತೆಯಂ ಮಿಗೆಬಿಡದೆ ಮಂದಿರದೊಳಗೆ ಪೊಕ್ಕು ಮಖವೀರ್ಯ ನಿಜಭಾರ್ಯೆಯ॥
ಅಂತರಂಗಕೆ ಕರೆದು ನಡೆದ ವೃತ್ತಾಂತಮಂ।
ಕಂತುಮಾತ್ರದೊಳರಿಪಿ ತಾಂ ಮತ್ತೆ ಕೇಳಿದಂ।
ಸಂತತಿಯು ಸಮನಿಪುದೆ? ಶಿವನೊಲಿದರುಂಟು ಗಡ ನಮಗೊಲಿವುದೆಂತೆನ್ನುತೆ ॥

(೩೨) ಇಕ್ಕೆಲನನಾರೈದು ನಸುಲಜ್ಜೆವೊಳೆದೋರೆ।
ಮುಕ್ಕುಳಿಸುತೆಳೆನಗೆಯನೆಡೆಗೆಡೆಗೆ ಪತಿಯುಳಲು-।
ಪ್ರೊಕ್ಕಣೆಯನಾಲಿಸುತ್ತಳುಕುತಂದೊಳಗೊಳಗೆ ಮೊಗದಲ್ಲಿ ಮೋಡಿದೋರೆ॥
ಸೊಕ್ಕು ಜವ್ವನೆ ತನ್ನ ಕುಲಧರ್ಮ ಮರ್ಮಗಳ-।
ನೊಕ್ಕಣಿಸದೊಲಪಿನಿಂ ಪಾತಿನೇರ್ಪಡಿ ಬಿಡದೆ।
ತಕ್ಕ ನುಡಿಯಂ ಗ್ರಹಿಸಿ ಮಹಿಷಿ ಬಿನ್ನಯಿಸಿದಳ್ ಮರಿಗೋಗಿಲೆಯರವದಲಿ ॥

(೩೩) ಮೇಘಮುಂಬನಿಯಲ್ಲದರಿಯದನ್ಯತ್ರಮಂ।
ಆ ಗರುವಚಾತಕಂ ಧಾನ್ಯರುಚಿಭೇದಗಳ।
ಭೋಗಮಂ ಬಲ್ಲುದೇನಂತೆ ನಿನ್ನಂಘ್ರಿ ಕಮಲಾಶ್ರಯವನಲ್ಲದನ್ಯ ॥
ಯೋಗಮಂ ಬಲ್ಲೆನೇಂ ಶಿವನೊಲ್ಮೆಸೊಗದಾ ಪ್ರ-।
ಯೋಗಮಂ ತವಕರಣದೊಳ್ ನೋಡಿಕೊಳ್ಳೆನುತೆ।
ಮೂಗಿನಲಿ ವಾಮಕರತರ್ಜನಿಯ ಬೆರಲಿಟ್ಟು ವಿಜ್ಞಾಪನಂ ಗೆಯ್ದಳು ॥

(೩೪) ಪತಿಯು ಸದ್ವಾಕ್ಯಕ್ಕೆ ಮೆಚ್ಚಿ ಮಿಗೆ ಮನದಲ್ಲಿ।
ಸುತಲಾಭಮುಂಟಾಗದಿರದೆನುತೆ ನಿಶ್ಚಯಿಸಿ।
ಗತಿಶೂನ್ಯಗಿನ್ನದಾರ್ ಶಿವನೆ ಸದ್ಗತಿಯೆನುತೆ ಭಾರಮಂ ಪೊರಿಸಿ ಹರಗೆ॥
ಕ್ರತುವೀರ್ಯನಿರುತಿರಲು ದೈವತಂತ್ರದೊಳೈದೆ।
ವ್ರತಸಿದ್ಧಿಗಿದು ಹೇತುವೆಂಬಂತೆ ಶುಭದಿನದೆ।
ಋತುಕಾಲ ಸಂಭವಿಸಿತಾನೀರೆಗೇನೆನಲಿ ಸತಿ ಪುಷ್ಪವತಿಯಾದಳು ॥

(೩೫) ಫೇನಪಿಂಡೆಡೆಗೊಂಡ ಜಾಹ್ನವಿಯೊ? ತನಿಬಿಂಕ-।
ಜೋನಿಗರೆದುಕ್ಕಿಳಿವ ಸುರತರುವೊ? ಬ್ರಹ್ಮಹತಿ।
ಕೇಣಗೊಂಡವ್ವಳಿಸಿ ಭಾವಿಸ ಲಸತ್ಕಾಮಧೇನುವೋ? ಎಂಬಂದದೆ।

ಆನಿತಂಬಿನಿ ಮೆರೆದಳಲರಾಗಿ ಮುಡಿಗಲ್ಲಕೆ ।
ಪೀನಕುಚಗಳ್ ನಿಗುಚೆ ನೀವಿಗಳ ತಳಮಗುಚೆ ।
ಗಾನಮಂ ಕುಡಿಗೊಳಿಸಿ ಬೇಸರವನಳವಡಿಸಿ ನವರತ್ನ ಮಂಟಪದಲಿ ॥

(೩೬) ಅಸಿತನೀಲಾಳಿಕೆಯ ವದನ ಪ್ರದೇಶದಲಿ ।
ರಸಭರಿತರಾಗಸುಸ್ಫೋಟಕಂ ರೋಹಿಣಿಯು ।
ಕುಸುಮಾಸ್ತ್ರಕಲೆಗಳಿಂ ಶಶಿಗೆ ಮೇಲುಪರತಿಯನೀವಂತೆ ಕಾಣಿಸಿದುದು ॥
ಮಿಸುಪಬಿಂಬಾಧರದ ರಕ್ತಮದು ಕಮಲಾಪ್ತ ।
ಬಸವಳಿದು ಪಡುಗಡಲೊಳಿಳಿಯೆ ಸಂಧ್ಯಾರಾಗ ।
ಪಸರಿಸಿದ ಗಗನದಂತೊಪ್ಪಿದುದು ಕವಳದಿಂ ಕಪ್ಪುರಸುತಾಂಬೂಲದೆ ॥

(೩೭) ಮಾಡಿದಳು ಮಜ್ಜನವ ಮೂರನೆಯ ಮರುದಿನದೆ ।
ನೋಡಿದಳು ಕನಕಮಣಿ ದರ್ಪಣವ ಬೆಡಗಿಂದ ।
ತೀಡಿದಳು ಚಂದನವನಂಪಿಡುತ್ತರಸಿನವ ಕದಪಿಗುರೆ ಮಿರುಪ ಫಣೆಗೆ ॥
ಸೂಡಿದಳು ಕತ್ತುರಿಯ ಕುಂಕುಮಪರಾಗದಲಿ ।
ಕೂಡಿದಳು ಘಮಘಮಿಸುತಾಭರಣತತಿ ಮಿಂಚೆ ।
ಮೋಡಿವೆತ್ತಂದಿನಿರುಳರಸನನು ಬೆರಸಿದಳು ಸಂಗಕ್ಕೆ ಲಲಿತಾಂಗಿಯು ॥

(೩೮) ಹಂಸ ಮಿಥುನಗಳಂತೆ ಸರಸ ಸಲ್ಲಾಪದ ಪ್ರ-।
ಶಂಸೆಯಿಂದಾಲಿಂಗನದ ನಖಕ್ಷತದ ನಿ-।
ಸ್ಸಂಶಯ ಪ್ರೌಢಿಯಿಂ ಚುಂಬನದ ಸೌಖ್ಯ ಸತ್ತಾಡನೆಯ ಸೀತ್ಕಾರದ ॥
ಸಂಸರುಗಗಳ ಗಲಧ್ವನಿಗಳಿಂದಾನೃಪ ಹಿ-।
ಮಾಂಶು ಕಂದರ್ಪ ರೋಹಿಣಿ ರತಿಯೊಲಾನಂದ ।
ಹಂಸನಾದಂ ದಿವಾಶ್ವಿನಿಯು ಸುರತಾನಂದ ನಂದನದೆ ಪೆಂಪೊಡೆಯುತೆ ॥

*(೩೯) ಪರಿವಿಡಿಯೊಳಷ್ಟವಿಧ ಬಂಧನಗಳಂ ಪತ್ತು ।
ತೆರದ ಚುಂಬನಗಳಂ ಕರಜಪ್ರಹರಣಾಂಗ-।
ಳುರುತರಿಕೆಯನರಿತ ದಂಪತಿಗಳಲಸಿ ಕೈ ಮೈ ಮರೆಯದೇ ಮಾರನ ॥
ಹರಿಬದೊಳ್ ಸಮಜೋಡಿಯಿಂದೊದಗಿ ಬೆದರಿ ಹಿಂ-।
ಜರಿಯದೋರ್ವರಿಗೋರ್ವರೈದೆ ಮೇಲಾಟದಿಂ ।
ನೆರೆ ವೀರಭಟರಂತೆ ಕಾದಿದರ್ ಕಾವ್ಯಾರ್ಥಗಳನೊಲ್ಪು ಪಡೆಯಲೆನುತೆ ॥

*(೪೦) ಪರಿವಿಡಿಯಲಂಕಾರ ಶೃಂಗಾರದಾತುರದ ।
ಸರಸಹಾಸ್ಯದ ವೀರಮಾತುಗಳನೆಳೆನಗೆಯ ।
ಕರುಣದನಖಕ್ಷತದ ರೌದ್ರಕಾತುರ ಭಯಾನಕದ ಬೆಸುರೊಗೆಸಂಗದಾ ॥

ನೆರೆ ವಿಚಾರಿಸೆ ಪುಳಕನೆಗೆದಿರುವ ಬೀಭತ್ಸ-।
ವೆಸಿ ಮೋಹನದ ಶಾಂತತೆಯಿಂದ ದಂಪತಿಗ-।
ಳಿರದೆ ನವರಸ ಸುರತದಲಿ ಸವಿವುತುಬ್ಬೇರಿ ಮೈಮರೆದರಂದಿನಿರುಳು ॥

(೪೧) ಚಲಿಸೆ ಕೃತಕಧಮ್ಮಿಲ್ಲ ಮೇಘಮೆನೆ ಮಿಂಚಿನೊಲು ।
ಪೊಳೆಯೆ ಕಣ್ಗದಿರ್ಗೆಡೆ ಕಾಂಚಿ ಕಿಂಕಿಣಿರವದೆ ।
ಮೊಳಗು ಮೊಳೆತುರೆ ಮೆರೆಯೆ ಭ್ರೂಲತೆಯ ದುಶ್ಶ್ಯಷ್ಟಸುರಚಾಪದಂತೆಸೆಯಲು ॥
ಲಲಿತತನುಪುಳಕ ಶರಕಣಗಳುರುಪನಿಗಳಂ-।
ತಿಳಿವರಿಯೆ ಕಾಮಿನಿಯೊಳುಪರತಿಯು ಪ್ರತ್ಯಕ್ಷ ।
ಮಳೆಗಾಲದಂತೊಪ್ಪಿತ್ತೈ ಶ್ವಾಸದೆಲರಿನಿಂದೊರಗಿದಂ ಪ್ರಿಯಳಂಗನೆ ॥

(೪೨) ಮೈಮುರಿದು ತರುಣೀಶಿರೋಮಣಿಯುಳನಿತರ-।
ಲ್ಲೋಮನಸಿನಿಂದ್ಯೆದೆ ತೊಳೆದು ಕೈಕಾಲ್ಗಳಂ ।
ಪ್ರೇಮದಿಂ ಪತಿವೆರಸಿ ಕನಕಪರ್ಯಂಕದಾಶಯನದಲಿ ಸಿರಿಯಂದದೆ ॥
ರಾಮಣೀಯಕವಾದ ದೀಪಪ್ರಕಾಶದಿಂ ।
ಕಾಮಿತಂ ಕೈಸಾರ್ದ ಕೋವಿದರ ಮಾಳ್ಕೆಯಿಂ-।
ದಾಮುಹೂರ್ತದೊಳಂದು ಪವಡಿಸಲು ಕನಸನುರೆ ಕಂಡು ಸತಿ ಬಳಿಕೇಳುತೆ ॥

(೪೩) ಇನೆಯಳಿನೆಯನನೆಬ್ಬಿಸೆಂದಳೆಲೆಕಾಂತ ಕೇಳ್ ।
ಕನಸಿನಲಿ ರವಿಯೊಲ್ ಪೊಳೆವತೇಜವೊಂದೀಗ ।
ವಿನಯದಿಂ ಬಂದೆನ್ನ ಜಠರದಲ್ಲುರೆ ಪೊಕ್ಕು ಬಳುಕುವೆಂ ವಹಿಸೆನ್ನಲು ॥
ಮನದೊಳಾಂ ಬೆರಗಾಗಿ ಕಣ್ದೆರೆದೆನೀಕ್ಷಣಂ ।
ಮನಕೆಂತು ತೋರ್ಪುದದನೆನಗರುಪವೇಳ್ಕೆನಲ್ ।
ಜನಪಾಲನಲವೇರಿ ಸೂತ್ರಧಾರಂ ಬಲ್ಲನೆಮಗೇನರಿವುದೆಂದನು ॥

(೪೪) ಪತ್ನಿಸಂವೇಶದೊಳ್ ಕಂಡುದಂ ಪೇಳಲ್ ಪ್ರ-।
ಯತ್ನದಿಂದಾಫಲವನಾಗಳಾ ಮುಖವೀರ್ಯ ।
ಪತ್ನಿಗುರೆ ತಿಳಿಸದೆ ನಿಜಾತ್ಮದಲಿ ನಿಕ್ಷೇಪಮಂ ಗೆಯ್ದು ಪವಡಿಸಲಿಕೆ ॥
ರತ್ನದೊಲು ಪೂರ್ವಾದ್ರಿಶಿಖರದಲಿ ಶಾರ್ವರ ಸ-।
ಪತ್ನನಹಭಾನು ಸಂಜನಿಸುತಾಕ್ಷಣದೊಳ್ ಪ್ರ-।
ಯತ್ನದಿಂದೆಲ್ಲರ್ಗೆ ಮೈದೋರೆ ಮೈಮುರಿದನವನಿಪಂ ನಿದ್ರೆಯುಳಿದು ॥

(೪೫) ಗೂಢವಾದರ್ಥಮಂ ತಿಳಿಸುತಾ ಕಾದಲರ್ ।
ರೂಢಿಯಿಂದಿರುತಿರ್ದರನ್ನೆಗಂ ದಿನದಿನಕೆ ।
ಕೂಡೆ ಮೇಲ್ ಕಂಗೊಳಿಸಿತಾಪುಗರ್ಭದ ಚಿಹ್ನೆ ಕಡುಸರಾಣೆ ಚಿನ್ನದಂತೆ ।

ಆಡಲೇನವಯವಂ ಪೊಳೆದು ಬಣ್ಣಂ ಪುಟ್ಟೆ ।
ಮೋಡಿವೆತ್ತುಭಯ ಗುರು ಕುಚ ಕಲಶ ಜಘನಗಳ್ ।
ನೋಡುತಿಹ ಪೆಣ್ಜನಕೆ ಸಿಳಯದಲಿ ರತಿಯಂತೆ ತೋರಿದಳ್ ನೃಪನರಾಣಿ ॥

(೪೬) ಸಂತಾನವಂಕುರಿಸಿ ಬೆಳಗೆ ನಿಜ ಜಠರದಲಿ ।
ಕಾಂತಾಶಿರೋಮಣಿಗೆ ಮುನ್ನ ತಾಂ ವ್ಯಾಪಿಸೊಡ-।
ಲಂತಸ್ಥವಾಗಿರ್ದ ವಂಧ್ಯಾನುಹಾತವಂ ಪೊರಪೊಣ್ಮೆ ತೋರ್ಪಂದದೆ ॥
ನಿಂತ್ರೈದೆ ತೋರ್ಪಡಿಸಿತತಿಕಪುರ್ ರಮ್ಯವಡೆ-।
ದಂತಾಗಳಾಸತಿಯ ಕುಚಮಂಡಲದ್ವಯದೊ-।
ಳಂತಗ್ರದಲ್ಲುದಿಸಿ ಪದ್ಮಕುಟ್ಮಲಗಳಲ್ಲಡಗಿರ್ದಳಿಗಳಂದದೆ ॥

(೪೭) ಕಡುಚಿತ್ರ ಫಲದೊರೆಯಿತೆನಗೆನುತೆ ಸಣ್ಣ ನಡು ।
ಹಿಡಿಗೈಯೊಳಡಗುವತಿ ತತ್ವಭಾವವನುಳಿದು ।
ಸಡಗರದೆ ಹಿಗ್ಗಿ ಕಾಂಚೀಯೋಗವಂ ತಾಳ್ದು ಮೆರೆಯುತಿರೆ ಸತ್ಕೀರ್ತಿಯು ॥
ಕುಡಿವೆಳಗು ಕೈರವಸುಲೋಚನೆಯ ಸಿರಿಮೊಗದೆ ।
ಗುಡಿಗಟ್ಟೆತದರಿಂದೆ ಪುಂಡರೀಕಮಿದೆಂಬ ।
ಜೆಡಗಿನಿಂ ಕಂಗೊಳಿಸುತಿರ್ದದಮೃತಾಂಶುವಿನ ಬಿಂಬದಂತದುಮಲ್ಲದೆ ॥

(೪೮) ಕಾರ್ಮುಕಪಯೋಧರಗಳೊಡ್ಡಾಗಿ ತೋರುತಿವೆ ।
ಪೇರ್ಮೆಯಿಂ ವರ್ಷ ಸಾವಿರೊಪ್ಪೈದಿತು ತಾಯೆ ।
ನೀರ್ಮೊಗವ ಪೊಡೆಯೊಳಿಹ ಬೆಳಗಂಡರಾವೈವೆ ಪರಿಪೂರ್ಣ ಸೌಭಾಗ್ಯರು ॥
ಧಾರ್ಮಿಕರ್ ಸಜ್ಜನರ್ ಹಾರೈಸಿಕೊಂಡಿಹರ್ ।
ಪಾರ್ಮನುಜರಗ್ಗಳಿಕೆ ನೆಗ್ಗುವುದು ಕೇಳೆನುತ ।
ಸೋರ್ಮುಡಿಯನಾಳಿಯರ್ ಕಟ್ಟುತಾಸತಿಗೆಂವರುಭಯಾರ್ಥ ಕೃಷಿನೆವದಲಿ ॥

(೪೯) ನವಮಾಸ ಪೂರೈಸಲಾಸತಿಗೆ ಬಿಡನೊಡನೆ ।
ದಿವದಲ್ಲಿ ಕಾಂಚಿಕಟಿ ಮಿಡಿಮಿಡಿದು ಚಳುಕಿಡಲ್ ।
ತವಕದಿಂ ಪ್ರಾಣಾಪ್ತ ಮಿತ್ರೆಯರ್ ಚೇಟಿಯರ್ ಮೇಟಿಯವರೊಂದುಗೂಡಿ ॥
ಯುವತಿಯಂ ಮಂತ್ರಣಾಲಯಕೆಬ್ಬಿಸಲ್ ನೃಪಂ ।
ಚ್ಯವನ ಭೃಗು ಜಮದಗ್ನಿ ಮುಂತಾದ ಋಷಿಗಳಂ ।
ಪವಣಿಕೆಯೊಳುರೆ ನೆನೆದು ಬರಿಸಿದಂ ನಿಮಿಷದಲಿ ನೆರಹಿದಂ ಭೂಸುರರನು ॥

(೫೦) ಶುಭಮಹ ಸುಲಗ್ನದಲ್ಲಶ್ವಿನಿಯ ನಕ್ಷತ್ರ-।
ದುಭಯಸಚ್ಚರಣದಲಿ ದಿವ್ಯಕಾಂತಿಪ್ರತತಿ ।
ನಿಬಿಡತೆಯ ಕೋಮಲತ್ವದ ಮಹಾಸಾಸಿರಸುಕರಗಳಿಂ ದಿನಪನಂತೆ ॥

ಸೊಬಗಿನಿಂ ಜನಿಸಿದಂ ಮಾತೆಯುಂ ನೋಯಿಸದೆ ।
ಕುಬುಬಿರಿದು ಕಾಂತೆಯರಿವಂ ಚಕ್ರವರ್ತಿಯೀ- ।
ತ್ರಿಭುವನವನಾಳ್ವ ಕಾರಣದೊಳುದಿಸಿದುದು ಧಿಟವೆನುತೆರಗಿ ಕೈಮುಗಿದರು ॥

(೫೧) ಬಾಣತಿಯು ಸಂತವಿಸಿ ಕೈದೊಳೆದು ಮೈದೊಳೆದು ।
ಜಾಣೆಯಂ ನಸುನಗುತೆ ಬಾಲಕನನಾಪತಿಗೆ ।
ಕಾಣಿಕೆಯನಿತ್ತಂತೆ ಕೈಗಿತ್ತು ಬೇಗದಿಂದವನಿಪನ ಬಳಿಗೈದುತೆ ॥
ರಾಣಿ ಪಡೆದಳ್ ಜೀಯ ಸುಖವಾಗಿ ಸನ್ಮಹಾ- ।
ಕ್ಷೋಣಿಗಚ್ಚರಿಯಾಗಿ ಭುಜಸಹಸ್ರವನಾಂತ ।
ಸೂನುವನೆಮಗೆ ಮೆಚ್ಚನೇನನಿತ್ತಪೆಯೆನಲು ಕೋಟಿ ಧನಮಂ ಕೊಟ್ಟನು ॥

(೫೨) ಪೊಡಿಸು ಡಂಗುರಮಂ ಪುರವನಲಂಕರಿಸೆಂದು ।
ನಡಿಸಿದಂ ಮಂತ್ರಿಯಂ ಕೋಶಗಳನತಿಭರದೊ- ।
ಳೊಡಿಸಿತ್ತು ಋಷಿನಿವಹಕಭಿನಮಿಸಿ ಕೇಳಿದಂ ಫಲಸಿದ್ಧಿಯಂ ಜನನದ ॥
ನುಡಿದರವರುಬ್ಬುಬ್ಬಿ ಶುಭಕರಂ ಸರ್ವಜ್ಞ ।
ಕಡು ಶೌರ್ಯವಂತ ಚಕ್ರೇಶನೆಂಬಂಕಿತಂ ।
ಪೊಡವಿಯಲಿ ನಿಮಗಿನ್ನು ಸಾಟಿ ನೃಪರಾರೆನಲು ಸಭೆಯೊಳ್ದೊಡನೆ ಕುಣಿದುದು ॥

(೫೩) ಆದುದದರಿಂ ಮೇಲೆ ಪತ್ತುದಿನ ಮೀರಲಾ- ।
ಮೇದಿನೀಪತಿ ಮತ್ತೆ ನಿಜಬಂಧು ವರ್ಗ ಸಹ ।
ವೈದಿಕ ವಿಧಾನದಿಂ ಕಾರ್ತವೀರ್ಯಾರ್ಜುನನೆನುತ್ತ ಪೆಸರಿಟ್ಟು ಸುತಗೆ ॥
ಆದರಿಸಿ ಮೋದದಿಂ ಕಣ್ದಣಿವೊಲೀಕ್ಷಿಸುತೆ ।
ಮೈದಡವಿ ಮೇಳೈಸಿ ರನ್ನದೊಟ್ಟಿಲೊಳಿಟ್ಟು ।
ಚಾದರವ ಮರೆಮಾಡಿ ಜೋಗುಳವ ಪಾಡುತಾ ದಂಪತಿಗಳಿರುತಿದ್ದರು ॥

(೫೪) ಅಚ್ಚಕೆಂದಾವರೆಯ ಪೂವಿನಂತಾನನದೆ ।
ಸ್ವಚ್ಛದಿಂ ನಲಿವುತಂದಬ್ಬೆಯಂ ನಿಟ್ಟಿಸುತೆ ।
ಪೆಚ್ಚಿನುಲ್ಲಾಸದಿಂ ಬಾಹುಸಂಕುಲಗಳಂ ಪಸರಿಸುತೆ ತೊಟ್ಟಿಲಲ್ಲಿ ॥
ಅಚ್ಚರಿಯೊಳಾಡುತ್ತೆ ತೂರಿದೊಗುವ ಮೊಲೆಗಳಂ ।
ಕಚ್ಚಿ ಪಾಲುಣ್ಣುತ್ತೆ ಸನ್ನೆ ಸಂಜ್ಞೆಯನರಿತು ।
ಮೆಚ್ಚಿಕೊಂಡಿರುತಿಹಂ ಬಾಲಕಂ ಶ್ರೀಹರಿಯ ಕರದ ಸುಖಮಂ ನೆನೆಯದೆ ॥

(೫೫) ಪಕ್ಕರೆಯ ನೊರೆವಾಲನನುದಿನಂ ಮೀಸಲಿ- ।
ಟ್ಟಕ್ಕರಿಂದಣುಗಂಗೆ ನಿಜಜನನಿ ಪೊಂಬಾಳೆ ।
ವಿಕ್ಕಿಸೆವ ಕೊಡೆಗಳಲಿ ಮಲಗಿಸತ್ತಾ ಕರಂ ಕೂಗಿಡುತೆ ಮಣಿಯೊಳಲೆಯು ॥

ಲೆಖ್ಖದಿಂದುರೆತುಂಬಿ ತುಂಬೆರೆದು ಸತ್ಕರಿಸ-।
ಲುಕ್ಕುವಾವೋದದಿಂ ವಿಪ್ರ ಮಾಯೆಯುನೇಣ್ಗೆ।
ಸಿಕ್ಕಿ ಸಂತುಷ್ಟಿಯಂ ಪೊಂದಿಕೊಂಡಿರ್ದೆಯ್ಯ ನೀನಂದು ಕೇಳ್ ಭರತನೆ ॥

(೫೬) ಹರಿದುದಲ್ಲಿಂ ಬಳಿಕ ಧರಣಿ ದಿಗ್ವಲಯದಲಿ।
ತರಳನುದ್ಭವದೊಸಗೆಗೇಳುತಾಕ್ರತುವೀರ್ಯ।
ನರಪತಿಯ ಬಂಧುಗಳ್ ಹಾರೈಸಿ ದರ್ಶನವನೀಯುತಿರಲಾನಂವದೆ ॥
ಪರಿಪರಿಯ ತೊಡವುಗಳ್ ಧೇನುಸಂಕುಲ ದಿವ್ಯ।
ಮರಕತದ ಗಾಡಿಗಳೊಳೆಳೆವ ಕಿರಿವಂಚಗಳ್।
ಬರುತಿರ್ದವೇನೆಂಬೆನಂದಿನುತ್ಸಾಹವಂ ರಾಘವೇಶ್ವರ ಬಲ್ಲನು ॥

*(೫೭) ಮೆರೆವ ಶೌನಕಗೋತ್ರ ಜಾತ ಭೂಸುರವರ್ಯ।
ಹಿರಿಯೂರ ಕರಣೀಕ ಬೊಬ್ಬೂರ ರಂಗಪ್ಪ।
ವಿರಚಿಸಿದ ವರಪರಶುರಾಮ ರಾಮಾಯಣದೊಳೀತೃತೀಯೋಧ್ಯಾಯದಾ ॥
ಗಿರಿಬಾಣ ಪದ್ಯಂಗಳಂ ಮಿಗೆ ಕಡೇಕೋಡಿ।
ಪರಮಯ್ಯ ಹೆಗ್ಗಡೆಯು ಪಡೆದ ಸುತರೈವರಲಿ।
ಪಿರಿಯನಪ ವೆಂಕಪ್ಪ ಶೋಧಿಸುತೆ ತಿದ್ದಿದಂ ಶ್ರೀನಿವಾಸನ ದಯದಲಿ ॥

॥ ಅಂತೂ ಅಧ್ಯಾಯ ೩ ಕ್ಕೆ ಪದ್ಯ ೧೩೩ ಕ್ಕೆ ಮಂಗಳಮಸ್ತು ॥

---

## ೪ ನೇ ಅಧ್ಯಾಯಂ.

**ಸೂಚನೆ:**—ಲೀಲೆಯಿಂ ಬಾಲತನದಲಿ ಬೆಳಗಿ ಬಳೆವುತಿಹ।
ಲೋಲಮತಿಯುತ ಕಾರ್ತವೀರ್ಯಂಗೆ ವಿದ್ಯವಂ।
ಪೇಳಲೆಂದತ್ರಿಜಂ ಪುರಕೈದಿ ನೃಪಗರಿಪಿ ಕರೆದೊಯ್ದನಾಶ್ರಮಕ್ಕೆ ॥

(೧) ಭರತಕ್ಷಿತಿಪ ಕೇಳ್ ದಿವಾಶ್ವಿನಿಯ ನಂದನಂ।
ನಿರುತಮುತ್ಯುತ್ಸವದೊಳಿರೆ ಶುಕ್ಲ ಪಕ್ಷದಲಿ।
ಹರಿಣಧರನಭಿವೃದ್ಧಿಯಪ್ಪಂತೆ ದಿನದಿನಕೆ ಬಳೆವುತ್ತೆ ತೊಟ್ಟಿಲಲ್ಲಿ।
ಮೆರೆವ ಮೇಲ್ಗಟ್ಟನುರು ಮಂಟಪಡೆ ದಶದಿಶೆಯ।
ಮಿರುಗಿಡುವ ಸಿರಿಕಂಡದೆಣ್ಣೆ ಪಂಜುಗಳಿಂ ಸೊ-।
ಡರುಗಳಿಂ ಬಜ್ಜರದ ಕರಗಳಿಂದೋಲೈಪ ನಾರಿಯರ ಸಂಗದಿಂದೆ ॥

(೨) ಕಪ್ಪಾದಮುಂಗುರುಳ್ದುರುಬಿನಿಂ ಕೆಂಬವಳ-।
ಕೊಪ್ಪಾದ ಚಂದುಟಿಯ ರುಚಿಗಳಿಂ ಕಿರಿಜೊಲ್ಲು।
ಸುಪಪ್ಪಣೆ ಮುತ್ತಿನಂತಿಪ್ಪ ರಸದೊತ್ತಿನಿಂ ಥಳಿಪಾಸಿಡುಗಣ್ಣಳಾ ॥

ದಪ್ಪಾದ ಗಂಭೀರನಾಭಿಯಿಂ ಥಳಥಳಿಸು-।
ತಿಪ್ಪಾಪುಕರಗಳಿಂ ಬಟ್ಟನುಣ್ಗೊಡೆ ಜಂಘೆ-।
ಗೊಪ್ಪುತ್ತಿರುವಮೆಲ್ಲಡಿಗಳಿಂದೆ ಮಖವೀರ್ಯನಾತ್ಮಜಂ ಶೋಭಿಸಿದನು ॥

(೩) ಮುತ್ತಿನರಳೆಲೆ ಪೊಳೆವ ಮಾಣಿಕದ ಮಾಗಾಯಿ।
ಹತ್ತಿಸಿದ ವಜ್ರಕಟಿಸೂತ್ರ ವೈಡೂರ್ಯಮಣಿ।
ಕೆತ್ತಿದುರುಭುಜಕೀರ್ತಿ ನೀಲಗೋಮೇಧಿಕದ ವಿದ್ರುಮದ ಮುದ್ರಿಕೆಗಳು ॥
ಮೆತ್ತಿದುರುಪಚ್ಚೆ ಕಾಲಂದುಗೆಯು ಪುಷ್ಯರಾ-।
ಗತ್ತಟದ ತೋಳಮಣಿ ಚಿನ್ನದಿಂ ಥಳಥಳಿಸೆ।
ಪೊತ್ತು ನವರತ್ನಮಂ ಬೆಳಗಿದಂ ರವಿರಶ್ಮಿಯಂತಾತರುಳನಾಗಳು ॥

(೪) ಸರ್ವೋಪಚಾರದಿಂದಿರುತಿರಲು ಬಾಲಕಗೆ।
ನಿರ್ವಿಘ್ನಸಾರದಿಂ ವರುಷವೊಂದೆರಡಾಗೆ।
ನಿರ್ವ್ಯಾಪಿಸಿತ್ತಾಗ ನಾಲಿಗೆಗೆ ಬೆಡಗಿನಿಂ ಗಿಳಿನುಡಿಯು ಚದುರಿನಿಂದೆ ॥
ಉರ್ವೀಶನೆಡೆಗೈದಿ ತೊಡೆಯಲ್ಲಿ ಮಂಡಿಸಿರೆ।
ಸರ್ವತ್ರ ಪರಿಜನಂ ಬಂದು ಬಂದಭಿನವಿಸೆ।
ನಿರ್ವಾಹಕತ್ವದಿಂದವನದಂ ಕೈಕೊಳ್ಳುತೊಲಪಿನಿಂ ನಲಿಯುತಿಹನು ॥

(೫) ಹರನಯನವೇದಂಗಳಬುದಮುರೆ ಬಗೆಹರಿಯೆ।
ತರಳರಂ ಬೆರಬೆರಸಿ ತಾನವರಿಗರಸಾಗಿ।
ಕರುವಾಡಗಳಲಿ ಸೆರೆಯಿಕ್ಕುವಂ ತೊಲಗುವಂ ಮತ್ತೊಂದು ಮುಣಿವಂಚದೆ ॥
ಹರನೆಂಬ ಭಜನೆಯಂ ನೆಲೆಗೊಳಿಸಿ ನರ್ತಿಸುತೆ।
ಪರಿಪರಿಯ ಪುಷ್ಪದಿಂ ಪೂಜಿಸುತೆ ಮಗುಳದಂ।
ಮರೆದು ನೆನೆದೌನ್ನ್ಯಯಂ ಸಾದರ್ ಮಿದುವಾಸಿನಲಿ ಮಲಗುವಂ ನಿದ್ರಿಸುತ್ತೆ ॥

(೬) ಕೆನೆವಾಲನುರೆ ಸವಿದು ತಾತಮಾತೆಯರಲ್ಲಿ।
ಮನವೊಲಿದು ಮುದ್ದಿನಿಂ ಕಥೆಗಳಂ ಕೇಳ್ದವಂ।
ವಿನಯದಿಂದಾಕಥೆಗಳಂ ಬಿಡದುಸುರ್ದಪಂ ಸೊಗಸಾದ ನಲ್ನುಡಿಯಲಿ ॥
ಮನೆಯ ಮಣಿವಾಗಿಲಿಗೆ ಸಾಸಿರಸುಕರಗಳಿಂ।
ಮುನಿಸಿನಿಂ ಮಾರಿಕ್ಕಿ ದಾರಿಯಂ ಕಟ್ಟುವಂ।
ತನಗೆ ತಾಂ ಕೃಪೆವೆತ್ತು ತೊಲಗುವಂ ಮನ್ನಿಸಿದರೊಲಪಿನಿಂ ಕ್ರತುವೀರ್ಯಜ ॥

(೭) ಅಂಬರವನುಡಿಸೆನುತೆ ಗಗನಮಂ ತೋರ್ದಪಂ।
ತುಂಬೆಯಂ ಕೊಲ್ಲುವಂ ಚಂಪಕದ ಕುಸುಮದಿಂ-।
ದಂಬೆಗಾಲಿಂದೈದಿ ತನುವನುರೆ ತೂಗುವಂ ಮಾತೆಯ ಪಯೋಧರವನು ॥

ಹಂಬಲಿಸಿ ಗುಂಭದಿಂದೈದುವಂ ಚಾತಕಗ-।
ಳಂಬುದವನರಸುವೋಲ್ ತಿಲಕಮಂ ರಚಿಸೆನುತೆ।
ಕಂಭದಲಿ ಚಿತ್ರಮಂ ಬರೆದಪಂ ಸಂಜ್ಞೆಯಿಂ ಕ್ರತುವೀರ್ಯ ಸಂಜಾತನು॥

(೮) ಮತ್ತೆ ಕೇಳಾತಂಗೆ ವರುಷಮೈದಾರಾಗೆ।
ಸುತ್ತಲಿಪ್ಪೋರಿಗೆಯ ಕೆಳೆಯರ್ಕಳೊಡಗೊಂಡು।
ಹತ್ತರದೊಳುರೆಪರಿವ ರೇವಾತರಂಗಿಣಿಗೆ ನಾವೆಯಂ ನೆಲೆಗೊಳ್ಳಿಸಿ॥
ಪತ್ತಿಕೊಂಡೊಡನನಿಬರೆರಕದಿಂದಾಡುವಂ।
ಕೊತ್ತಳವ ಕೋಟೆಯಂ ಮಳಲಿಂದೆ ನಿರ್ಮಿಸು-।
ತ್ತೊತ್ತಳದೆ ಹೆಣಗುವಂ ಜುಣುಗುವಂ ಜವದಿಂದೆ ನೃಪಬಂದನೆಂದೂಹಿಸಿ॥

(೯) ತರುವಲಿಗಳೊಡಗೊಂಡು ಆಯುಮಂ ಪೊಕ್ಕಮುಲ-।
ತುರಗಮಂ ಬಿಡಿಸಿ ಮಿಗೆ ಗಲಭೆಗಳನೆಬ್ಬಿಸುತೆ।
ಪರಿಹರಿಸಿ ಬಳಿಕದಂ ಮತ್ತ ಕಲಭವನೊಡನೆ ನಲಿದೇರಿ ನಾಲ್ದೆಸೆಯಲಿ॥
ಹರಿಸಾಡುತೆಲ್ಲರಂ ಬೊಗರಿ ಚಂಡಾಟ ಗುರಿ।
ಪರಿಮಿಗಿಲು ಚಿಣಿಫಣೀ ಚದುರಂಗ ಪಗಡೆಯಂ।
ಮಿರುಗೊಳಿಸಿ ಹುರಿಯೇರುತಾಡುತ್ತೆ ಗೆಲ್ದವಂ ಮಂದಿರಕ್ಕೈತಪ್ಪನು॥

(೧೦) ಕಾಶಿಯಂ ಬಿಗಿದುಟ್ಟು ಗರುಡಮನೆಯಂ ಪೊಕ್ಕು।
ವಾಸಿಪಂಥದೊಳಲ್ಲಿ ದುಡಿವವರ್ಗಮ್ಮಡಿಯ।
ಸಾಸದಿಂ ದಂಡೆಯಂ ನೂಕುತ್ತೆ ತಿರುಹುತ್ತೆ ಲೋಡುನಿಡುಸಾಣಂಗಳ॥
ಬೇಸರಿಸಿ ಮತ್ತದಂ ತೊರೆದು ಮಗುಳಲ್ಲಿರದೆ।
ಮಾಸದುರುಕೀರ್ತಿಯಿಂದಕ್ಷರಾಭ್ಯಾಸಕರ।
ಘೋಷವಿಡಿದೈದುತ್ತೆ ಲಾಲಿಸದನುಳಿದೈದೆ ಚಿಗಿದಪಂ ಕೆಳೆಯರೊಡನೆ॥

(೧೧) ಅಧ್ಯಯನಮಂ ಪೇಳ್ವ ವಿಪ್ರವಟುವರ್ಗದಲಿ।
ವಿದ್ಯಾರ್ಥಿಯಾನೆಂದು ಪಾಠಮಂ ಪಠಿಸುತ್ತೆ।
ಉದ್ಯೋಗದವರೊಡನೆ ಕುಳಿತಲ್ಲಿ ಕೇಳುತ್ತೆ ದಿನಚರ್ಯದಾದಾಯುವ॥
ಗುದ್ಯಾಟಗಲಭೆಯಂ ಕಂಡಲ್ಲಿ ಶಿಕ್ಷಿಸುತೆ।
ಪದ್ಯಾದಿಗೀತಮಂ ಪೇಳ್ವರಂ ಮನ್ನಿಸುತೆ।
ಸದ್ಯೋಚಿತದ ಚಾಗಮಿತ್ತೈದುವಂ ತನ್ನ ಪಿತಗರಿಕೆ ಮುನ್ನಿಲ್ಲದೆ॥

(೧೨) ಮನೆವಂದೆಡೆಯೊಳೆಲ್ಲ ಪರಿಪರಿದು ಸುಳಿದಾಡಿ।
ಜನನಿಯಂ ಜನಕನಂ ಸಾರಲೊಂದಾನೊಂದು।
ದಿನದೆ ತನುಜನ ಮಂಗಲಾಕಾರಗಾತ್ರಮಂ ನೋಡಿ ಕಡುಮೋಹದಿಂದೆ॥

ಘನಪುಲಗ್ನದೆ ಸುತಗೆ ಗರ್ಭಾಷ್ಟಮಾಬ್ದದ-।
ಲ್ಲನುವರಿತು ಮೌಂಜಿಯಂ ಕಟ್ಟಿದಂ ವಿಭವದಿಂ।
ಮುನಿಮುನಿಗಳಾಶ್ರಮದೊಳೆಲ್ಲಮುರೆ ಜಪಮಾಯ್ತು ಮಖವೀರ್ಯಜನ
ಕೀರ್ತಿಯಾ ॥

(೧೩) ಕೇಳುತಾನಂದಗೊಂಡೊಡನೆ ಕಾರುಣ್ಯದಿಂ।
ಮಗಲಮಂ ತಿಳಿಯುತಾ ತ್ರೈಮೂರ್ತಿ ರೂಪಮಂ।
ತಾಳಿ ಮಿಗೆ ಶೋಭಿಪಾ ಸಾಕ್ಷಾದ್ಭುವನ ದಿವಾಕರನೆನಿಪ ದತ್ತಮುನಿಯು ॥
ಬಾಲನೆಮ್ಮನ್ವಯದೊಳುದಿಸಿದನೆ ಮಜ ಭಾಪು।
ಬಾಲನಂ ನೋಳ್ಪೆನೆಂದುಭಯಮೇಕಾದಶ ವಿ-।
ಶಾಲದೋರ್ದಂಡನಾತ್ರಿಶಿರ ಯೋಗಾರೂಢ ಗಮಕದಿಂದೆದ್ದು ಬಳಿಕ ॥

(೧೪) ಭರದೊಳೈತರೆ ಮುನಿಯ ಕಣ್ಮನಕೆ ದೂರದಿಂ-।
ದುರೆ ಮಿರುಪ ತೇಜದಿಂ ಮಾಹಿಷ್ಮತಿಯಿದೆಂಬ।
ಧರಣಿಪತಿ ಮಖವೀರ್ಯನಾಮಹಾಪಟ್ಟಣಂ ಪಂಚವಿಮಲಾವರ್ತದೆ ॥
ಸುರಪನಮರಾವತಿಯೊಲತಿಶಯದೆ ಶೋಭಿಸಿತು।
ವರಶರತ್ಪರಿಪೂರ್ಣ ಚಂದ್ರಂಗೆ ಕಟ್ಟಿರ್ಪ।
ಪರಿವೇಷಮೆಂಬಂತೆ ವಜ್ರ ಮರಕತ ನೀಲರತ್ನ ಕನಕಂಗಳಿಂದೆ ॥

(೧೫) ಎದ್ದಕರುವಾಡಮಣಿಗೋಡ್ಗಳಿಂ ಪುಲಿಮೊಗಗ-।
ಳಿದ್ದೆಸೆಯ ಕರ್ಣಗಳ ಕದಪಿನಿಂ ಪೇರ್ಬಾಗಿ-।
ಲುದ್ದಮಾಗಿಹ ವದನಭಾಸದಿಂ ಕಂಠದುರು ಗಂಗಾಸುಕೃತ್ತಿನಿಂದೆ ॥
ಬದ್ಧಿಸಿಹ ಚೌದೆಸೆಯ ಕೊತ್ತಳಗಳಡಿಗಳಿಂ-।
ದಿದ್ದ ತೆನೆಮೊಲೆಗಳಿಂದುಪಕೋಟಿಮಾಲದಿಂ।
ನಿದ್ರೆಯಲಿ ಮಲಗಿಪ್ಪ ಗೋವಿನಂತೊಪ್ಪಿತ್ತು ಗೋಮಾವತೀ ನಾಮದೆ ॥

(೧೬) ಬೇಕೆನುತೆ ಭೂಲಲನೆಯಂಗಕೆ ಹರಿದ್ರಮಂ।
ಸೌಕರದೆ ಲೇಪಿಸುತೆ ಪಸುರುಡುಗೆಯಂ ತಾಳ್ದು।
ಜೋಕೆಯಿಂದಿರುತಿಪ್ಪಳೆಂಬೊಲಾವ್ರೀಹಿಫಲಪೊಂಬಣ್ಣದಿಂದೆಸೆದುದು ॥
ಕೋಕನದಕಾಸಾರಮಾರಾಮಮಂ ಬಳಸಿ।
ಶ್ರೀಕರದ ಪರಿವೇಷದೋಲ್ ನಡುವೆ ಹಚ್ಚಗಿರೆ।
ಕೋಕಿಲೆಗಳುಲುಹಿನಿಂ ಪಾಮರಿಯರಿರುತಿರ್ದರಲ್ಲಲ್ಲಿ ಸುಳಿದಾಡುತೆ ॥

(೧೭) ಕರಪಾದವಕ್ಷೋಜ ಮುಖಗಳ್ಗೆ ಪಂಕಜಂ।
ಸರಿಸಮೆನುತಳಿಗಳ್ಗೆ ಸೂಚಿಸುತ್ತರವನಿ-।
ತ್ತುರು ನೇತ್ರ ಕೈರವಗಳೊಡಗೂಡಿ ಕೊಂಡೆಯಂ ಶ್ರುತಿಗರಿಪೆ ಪಾಮರಿಯರು ॥

ಸ್ಮರನಿಕ್ಕೆಯಂ ಸೊಕ್ಕಿನಿಭವೇಳ್ಗೆಯಂತರಿಸಿ ।
ಜೆಂಬೆರಟೆ ಮೂಲಮಂ ಕಿತ್ತಭ್ರ ಕಿಡುವರಿನೆ ।
ನೆರೆ ಕಳವೆಗೈತರ್ಪ ಪಕ್ಕಿಗಳನಬ್ಜಮೂಲಂಗಳಿಂದಿಡುತಿರ್ದರು ॥

(೧೮) ಗಿಡುಗನಂತಬ್ಬರಿಸಿ ಗಿಣಿಗಳಂ ಪಾರಿಸು-।
ತ್ತಡಿಯಿಡುತ್ತಾಕ್ಷಣಂ ಗುಬ್ಬಿಗೊರವಂಕಮಂ ।
ನಿಡುಕೇಶಪಾಶಮಂ ಬೀಸಿ ಬೀಗೆ ಚದರಿಸುತ್ತೊಮ್ಮೊಮ್ಮೆ ದೊರೆವಕ್ಕಿಯು ॥
ಬೆಡಗಿನಿಂ ಬಣ್ಣದುಟಗೊಳಲೂದಿ ಬೆಚ್ಚಿಸು-।
ತ್ತೆಡೆಯಾಡುತಿರ್ಪ ಪಾಂಥರ್ಕಳಂ ಕಣ್ಗೊನೆಯು ।
ಕಡುನೋಟವಲಗಿನಿಂದಣಕಿಪಾ ಪಾಮರಿಯರಿಹ ಸೊಬಗದೇವೇಳ್ವೆನು ॥

(೧೯) ನೋಡುತವರ್ಗಳನತ್ರಿಸುತನಯನವಂ ಪಿಡಿದು ।
ರೂಢಿಯಿಂದೈತರಲು ಮುಂದೆಸೆಗೆ ದೃಶ್ಯವಾ-।
ಯ್ತಾಡಲೇನಂ ಪ್ರಪಾನಿಳಯಂಗಳೊಂದೆಡೆಯೊಳುರು ಚೂತವೃಕ್ಷಂಗಳಾ ॥
ಜೋಡಣೆಯುಸುಚ್ಛಾಯ ಶೈತ್ಯದಿಂದೀರ್ದೆಸೆಯ-।
ನೀಡಯಿಸಿಕೊಂಡಿರಲು ಚಂದನ ಸುಗಂಧಿನಿಯ-।
ರೂಡಿಸುವರಂದಲ್ಲಿ ಪರಿಮಳ ಸುವಾರಿಯಂ ಪಥಿಕರ್ಗೆ ತೃಷೆಯಡಗಲು ॥

(೨೦) ವಿಮಲತನುವಲ್ಲರಿಯ ಸೌರಭದ ಸುಣ್ಣನಿಯ ।
ರಮಣೀಯ ವಾಕ್ಸುಧೆಯ ಲಾವಣ್ಯರಚನೆಯಿಂ ।
ತಮತಮಗೆ ಪಥಿಕರಂ ಸೆರೆಗೆಯ್ಯೆ ನೇತ್ರಂಗಳಿಂ ಪ್ರಪಾಸುಂದರಿಯರ ॥
ಸಮುಖದಿಂದಾಘ್ರಾಣಿಸುತೆ ಪೀರ್ದು ಮಿಗೆ ನೋಡಿ ।
ಮಮತೆಯಿಂದುರೆ ನಲಿಯಲಾವಗಂ ಕರಣಗಳ್ ।
ಭ್ರಮೆಗೊಂಡು ಸಾವಿರಾಸ್ಯಕೈದಿಸುತ್ತಿರ್ಪವೆನೆ ಬಪ್ಪರುದಕಮನಿಚ್ಛಿಸಿ ॥

(೨೧) ವಿಧುಬಿಂಬವಕ್ತ್ರೆಯರ್ ಮೃದುಪಾಣಿಕಿಸಲಯಾ-।
ಸ್ಪದದೆ ಶೋಭಿಪ ಶಶಿಶಿಲಾ ಕಲಶಮಂ ಪಿಡಿದು ।
ಮೃದುಕರಕಮಲಮೈದೆ ಬರಿದಾಗದಂತೆ ನೀರೆರೆಯುತಿರಲಾಗಿ ಬಿಡದೆ ॥
ಚಮರಿಸಿಂದಾಶ್ರಯಿಸಿಕೊಂಡು ನೀರ್ಗುಡಿವ ಸಾ-।
ಹೃದಯರ್ಕಳಕ್ಷಿಗಾಕೋಮಲೆಯರಕ್ಷಿಗಳ್ ।
ಚಮರಿನಿಂದಂಜುಳಿಗಳಲ್ಲೆಸೆಯೆ ಚಲ್ಲಿ ಪರ್ ಪಿಂನ್ನೆಳೆಂದುಚ್ಚರಿಸುತೆ ॥

(೨೨) ಮತ್ತದೊಂದೆಡೆಯೊಳೋರ್ವನದೋರ್ವಳಾನನವ-।
ದುತ್ತಮದ ಶತಪತ್ರದಲರಂತೆ ಮುಂಗುರಳ ।
ವೊತ್ತಮಳಿಚಯದಂತೆ ಕಂಠ ಕಂಬುವಿನಂತೆ ನವರಸೋದರ ಭರಿತದೆ ॥

ವೃತ್ತಕರಪಾತ್ರೆ ಕಂಗೊಳಿಸಲತಿ ನೇಹದಿಂ ।
ದೊತ್ತರದೆ ನಗುತೆಂದನೆಲೆ ಕಾಂತೆ ತಿಳಿಗೊಳಂ ।
ಹತ್ತರದೊಳಿದೆ ಬೇಗನಾಡಲೇಳಂಗಜನ ಮದ್ದಾನೆ ನೀನೆನುತ್ತ ॥

(೨೩) ನಿಲ್ಲದಾವನಿತೆಸಗ್ಗಣ್ಣನರಳಿಸುತೆ ನಗೆ-।
ಯಲ್ಲಿ ಲಾವಣ್ಯ ಲಹರಿಯಲಿ ಪಲ್ಗದಿರ ಸೂ-।
ಸಲ್ಲುರೆ ಬೆಡಗಿನೊಳಾಡಲಿಕಾನನಾಥಳಲ್ತೆಲೆ ಪಾಂಥ ಕೈ ಬೊಗಸೆಯ ॥
ಸಲ್ಲಲಿತ ತಿಳಿಗೊಳಂ ವೈತರಣಿಯಪ್ಪುದೀ-।
ಕ್ಷುಲ್ಲಕಾಶಿಯನುಳಿಯುತಿಲ್ಲಿರದೆ ಕಲಿಗಾಲ-।
ದಲ್ಲೊಗುವ ಕೂಟ ಶಾಸ್ತ್ರಿಗಳ ಪೋಲಾಗೆನಲ್ ತೊಲಗಿದಂ ಮಿಂಚಿನಂತೆ ॥

(೨೪) ಭರತ ಕೇಳ್ ಭೂನಾಥನಾದಮಲ ದುಖವೀಯರ್ಗೆ-।
ನೂರು ಮಹಾ ಪಟ್ಟಣದ ಕಂಠಪ್ರದೇಶದಲಿ ।
ಬೆರಗಪ್ಪೊಲೀಪರಿಯೊಳಿಹುದನೆಲ್ಲವನೈದೆ ನಿಟ್ಟಿಸುತ್ತೊಯ್ಯೊಯ್ಯನೆ ॥
ಪರಿವಿಡಿಯೊಳುರುಜವದೆ ಯೋಗೀಂದ್ರ ಶಿಷ್ಯರಂ ।
ಬೆರಸಿ ಮುಂಬರಿವಿರದೆ ಬರ್ಪೆಡೆಯೊಳಡಿಗಡಿಗೆ ।
ಪರಿದರಿತು ಶಿರವೆರಗುತೈದುವರ ಪರಸುತ್ತೆ ನಗರಪ್ರವೇಶವೆಸಗೆ ॥

(೨೫) ಸೂತ್ರವಿಡಿದಂತಾಗ ಪರಿಮಳಗಳಿಟ್ಟಣಿಸಿ ।
ಚೈತ್ರನಾಪುಂಬೊಲಗಳಂತೈದೆ ಶಶಿವೀಥಿ ।
ಮಿತ್ರನುರು ರಶ್ಮಿಯಿಂದುರೆ ಮಿರುಗಿ ಮುಂದೆ ಮಿಗೆ ತೋರಿದವು ನೇರದಿಂದೆ ॥
ಗೋತ್ರರಿಪು ಲೋಕದಲ್ಲಿರುತಿರ್ಪ ಚಲ್ವೆಯರ ।
ಗಾತ್ರದ ಸುಚಲ್ವಿಯಂ ತಮ್ಮ ಲಾವಣ್ಯಮಂ।
ನೇತ್ರದಲಿ ತೂಗಿ ಮಿಗೆ ನೋಳ್ಪಗೆನೆ ಕೈತ್ರಾಸಿನಂಗನೆಯರೆಸೆದಿರ್ದರು ॥

(೨೬) ಹಾಸ ಸಿರಿ ಮಲ್ಲಿಗೆಯ ಸೂಸುತ್ತೆ ಪೂಪಮಂ ।
ಪೋಸಿಸುತೆ ತಂಡುಲಗಳಿವನೈದೆ ನೋಡೆಂಬ-।
ರಾಪತಿಯರೊಮ್ಮೊಮ್ಮೆ ಚೆಂದಳಿಗೈರ್ಗಳಿಂ ಕುಸುಬೆಯಂ ಪಿಡಿಯೊಳಿರಿಸಿ ॥
ಮೋಸಮುಲ್ಲಳಸಂದೆಯೆಂಬರುಗ್ಗಡಿಸುತುರೆ ।
ಪೈಸಿರಿಯ ಪೊಂಬಣ್ಣದುರುರುಚಿಯೊಳುರೆ ಬೆರೆದ ।
ಸಾಸುವೆಯು ಹಸನಾದ ಮೆಂತೆಯೆಂದುಚ್ಚರಿಸಿ ತೂಗುವರ್ ಲಾಗಿನಿಂದೆ॥

(೨೭) ಮೋಹರಸಮಂ ಪುಟಿಯೊಳಿನೆಯರ್ಗೆ ಬೈಚಿಟ್ಟು ।
ನೇಹಮಂ ಪುಟ್ಟಿಪಾ-ವಕ್ಷೋಜರಾಶಿಯಂ ।
ಸಾಹಸದೊಳುರದಲ್ಲಿ ಮಡಗಿಕೊಂಡೊಲಪಿನಿಂ ಕೇಳ್ಪರ್ಗೆ ಪಾದರಸಮಾ ॥

ಬೇಹನಾಗೀಯುವಾ-ತನ್ವಿಯರ್ ನವಧಾನ್ಯ-।
ದಾಹಲವು ರಾಶಿಯಂ ತಮ್ಮೆದುರ್ ಸುರಿದುಕೊಂ-।
ದೂಹಿಪೋಲ್ ತೋರಿದರ್ ಕನಕಕೃತ ಸಲ್ಲಲಿತ ಪುತ್ಥಳಿಗಳೆಂಬಂದದೆ ॥

(೨೮) ಕೊಂಕಿರುವ ಕುಡಿಪುರ್ಬೆಸಲ್ಗಣ್ಣ ಸೋಗೆಮುಡಿ।
ಸಂಕಲಿತದವರಾವದಿವ್ಯಾನನಂಗಳ್ಗೆ।
ಬಿಂಕದಿಂ ಚಂದ್ರಮಂ ಸರಿಯಾಗಿ ಜನಿಸಿದಪನೆಂದು ತಿಳಿದಾವ್ಯಾಜದೆ ॥
ಅಂಕೆಯಲ್ಲಿಡಲನಿಬರೊಂದಾಗಿ ಪಿಡಿದೊಡನೆ।
ಶಂಕಿಸದೆ ಮರ್ದಿಸುತೆ ತುಂಬಿಕೊಂಡಿಹರೆನಲ್।
ಕುಂಕುಮದ ಚಂದ್ರಿಕೆಯ ಭರಣಿಗಳ್ ರಂಜಿಸಿದವಂದಲ್ಲಿಗಲ್ಲಿಗೈದೆ ॥

(೨೯) ಮಿನುಗಿಸುತೆ ಪೆಡೆಮಣಿಗಳೊಲಪಿನಿಂ ಭೋಗಿಗಳ್।
ದಣಿದು ಮಿಗೆ ಬೇರೆಬೇರಿಳುಹಿಕೊಂಡಿರ್ಪವೆನೆ।
ಚಿನಿವಾರರೋಳಿಯಿಂದುರೆ ಶೋಭಿಸಿದರೊಂದೆಡೆಯೊಳಲಂಕಾರದಿಂದೆ ॥
ಮನುಮಥನ ಶಸ್ತ್ರಾಸ್ತ್ರಗಳಸದನವೆಂಬಂತೆ।
ಕಣುಮನಕ್ಕಾಮೋದಗೊಳಿಸುತೊಂದೆಡೆಗಲರ।
ನನೆಗಳಂ ಕುಶಲದಿಂ ಕಟ್ಟಿ ಮಿಗೆ ತೋರುತಿಹ ಪೂವಡಿಗರೊಪ್ಪಿರ್ದರು ॥

(೩೦) ಬಸವಳಿದು ಕುಂದದೊಲು ಕುಂದಗಳನಾರಿಸುತೆ।
ಕುಸುಮಾಳಿಗಾಸ್ಯಚಂದ್ರಿಕೆಯನುರೆ ತಳೆದೊಡನೆ।
ಕುಸಿಗೊಳಿಸರನಿಶಮಾಪೂವಡಿಗರೆಳೆವರೆಯದಂಗನೆಯರೊಲಪಿನಿಂದೆ ॥
ಶಶಿಮಾಯುವಜ್ರಿಗಳ್ ಬಿಡದೆ ಪರಿಮಳವನೀ-।
ವಸುಧೆಯಲ್ಲೊಯ್ಯದೋಲ್ ಚಂಪಕಸುನಾಗಗಳ।
ನಸುಗಂಪುದೋರುತ್ತೆ ಕಾಳಾಹಿವೇಣಿಯರಲಂಕರಿಸಿ ಕುಳ್ಳಿರ್ದರು ॥

(೩೧) ಕುರುಳಿನಲಿ ತಿಮಿರಮಂ ಫಣೆಯಲರ್ಧೇಂದುಮಂ।
ಇರುಳಂತೆ ಪಗಲಂತೆ ಹಂಸಮಂ ಗಮನದ-।
ಲ್ಲುರದಲ್ಲಿ ಚಕ್ರಮಂ ಸಜ್ಜಾಗಿ ಧರಿಸುತೆ ವಧೂಜಾಲ ಸಂಧಿಯಂತೆ ॥
ಅರುಣಪ್ರಕಾಶಮಂ ಮಿಂಚಿಸುತೆ ತುಟಿಗಳಲಿ।
ವರವಸಂತಾಗಮದ ಪಾದರಿಗಳಂತಳೆಗ-।
ಳೆರಕದಿಂ ಕಂಗೊಳಿಸುತಿರ್ದರಂದಂಗಜನ ಮಾಸಾಳ್ಗಳೆಂಬಂದದೆ ॥

(೩೨) ನುಣ್ಣದಪುಗಳಿಗನಿಶನೊಣೆಯಪ್ಪವೇನೆಂದು।
ಕಣ್ಣದಿರಿನಿಂ ಪರೀಕ್ಷೆಯನೆಸಗಲೆಳಸುತೆಳೆ-।
ವೆಣ್ಣಳುರೆ ಕನಕನವಮಣಿದರ್ಪಣಂಗಳಂ ನೋಳ್ಪರೆನೆ ಕರಕಂಜದೆ ॥

ಜಾಣ್ಗೆಲಸದುರು ಮುಕುರಮಂ ಪಿಡಿದು ಮೆಚ್ಚಿ ವಿಗೆ ।
ತಣ್ಗದಿರನಂತಿರ್ಪ ಮುಖಮಂಡಲಂಗಳಂ ।
ಗೋಣ್ಗಳಾಭರಣಗಳನೀಕ್ಷಿಸುತೆ ಮೋಹಿನಿಯರೆಂಬಂತೆ ಶೋಭಿಸಿದರು ॥

(೩೩) ಅರವಿಂದಗಳನುರೆ ಕರದೊಳಶೋಕವನಡಿಯೊ-।
ಳುರು ಮಾಂದಳಿರನಧರದೊಳ್ ಮಲ್ಲಿಗೆಯ ನಗೆಯೊ-।
ಳುರುತರದನೀಲೋತ್ಪಲಂಗಳಂ ಕಂಗಳಲ್ಲಿರಿಸಿಕೊಂಡೈದಂಬನು ॥
ಧರೆಯಲ್ಲಿ ಕಂದರ್ಪಗಳುಕದಿಹೆ ನೋಡೆನುತ ।
ಹರುಷದಿಂದೋಪನಂ ಕರೆಯುತೋರ್ವನಿತೆ ಕ-।
ರ್ಪುರಸುತಾಂಬೂಲಮಂ ಬೆಡಗಿನಿಂದೀಯುತಿರ್ದಾಬೆಡಗನೇವೇಳ್ವೆನು ॥

(೩೪) ಕಠಿಣಕುಚೆ ಚಪಲಾಕ್ಷಿ ಕುಟಿಲಕುಂತಳೆಯು ಸೀಂ ।
ಕಟಕಿಯಿಂದೆನ್ನನುರೆ ಕಠಿಣ ನೀಂ ಚಪಲಗುಣೆ ।
ಕುಟಿಲಗಾರನೆನುತ್ತೆ ಭಂಗಿಪೆಯ ನಿನ್ನೊಳಿಹ ಕುಂದನೊಂದಂ ಗಣಿಸದೆ ॥
ವಿಟಗಾರರಲಿ ಧೀರ ಗುಣದೆ ರತ್ನಾಕರಂ ।
ಸಟೆಯಲ್ಲೆನುತ್ತೆನ್ನ ನಿನ್ನ ನೆರೆಯಲ್ಲಿರ್ಪ ।
ಚಟುಳ ಮನ್ಮಥನರಸಿ ವಿಟಗಾರ್ತಿ ಬಯಸುತಿಹಳನಿಶಮುರೆ ಕಮಲಾಂಬಕಿ ॥

(೩೫) ದರಹಾಸಮಂ ಮೊಗಸುತವಳೆಂದಳಬಲೆಯರ ।
ಪರಿವಿಡಿಯನರಿವರಾರೆಮಗೆ ಸುಬಲರ್ಕಳುರೆ ।
ನರಲುತ್ತುರುಳುತಿಹರ್ ಮಾಯೆ ನುಂಗಳೆ ಜಗವನವಳದೇಂ ಸಾಮಾನ್ಯಳೆ ॥
ಹರನ ವಾಮಾಂಗಮಂ ಹರಿಯ ವಕ್ಷಸ್ಥಳವ-।
ನರವಿಂದಭವನ ನಾಲಿಗೆಯನಡರಿಹಳವಳ್ ।
ಮರುಳೆ ನಾವವಳ ವಂಶಜರೆಮ್ಮ ಮೆಚ್ಚಿಗೆಯನರಿವರಾರ್ ಮೂಜಗದಲಿ ॥

(೩೬) ನವಿಲ ಮುಡಿ ತೆಕ್ಕೆ ಪೊಂಪುಳಿಯುಳಿದು ಚಂದುಟಿಯ ।
ನವ ಸುಧಾಸಾರಮಂ ನೀಗಾಡಿ ಬಲ್ಮೊಲೆಯ ।
ಜವಳಿ ದುರ್ಗದ ಸಿರಿಯ ಕಳಕೊಂಡು ಮನ್ಮಥನ ಮಂದಿರದ ಮೇಲ್ಗಟ್ಟನು ॥
ತೆವರಿ ತಳಪಟಗೆಯ್ಸಿಕೊಂಡಳ್ಕುತಡಗುತ್ತೆ ।
ಬವರದಲಿ ಬಸವಳಿದ ವೀರನೋಲ್ ಮತ್ತೊಂದು ।
ಭವನದಿಂದಾಕಡೆಯ ಜಾರೆಯುಂ ಜಾರಿದರ್ ಮುಸುಕಿಟ್ಟು ಮುಸುಡಿಗೈದೆ ॥

(೩೭) ನೇರದಿಂ ನಾರಂಗ ನಾಗವಲ್ಲಿಗಳಂ ಗ-।
ಭೀರತೆಯ ರಸನಾಳಿಗಂಬ ಮುಡಿವಾಳಮಂ ।
ಚಾರು ಪಚ್ಚಗಳ ಕುಚಮಂಗನಾಭ್ಯಂಕಂಗಳಲ್ಲಿ ಮುಡಿದೊಳ್ಗಳಲ್ಲಿ ॥

ನಾರಿ ನೀನುರೆ ಮಡಗಿಕೊಂಡೈದೆ ಶಶಿಯಂತೆ ।
ತೋರುತಿಹ ವನಲಕ್ಷ್ಮಿಯಹುದದಾಂ ಮಾಧವಂ ।
ದೂರದವನಲ್ತೆನುತ್ತೋರ್ವನೋಪಳನೊಡಂಬಡಿಸಿ ನಸು ನಗುತಿರ್ದನು ॥

(೩೮) ಭಳಿರೆನ್ನ ಶಿಂಗಾಡಿ ನಿನ್ನ ಸಿರಿ ಪುರ್ಬಿನಲಿ ।
ತಳಿತೆನ್ನ ಕಮಲಾಸ್ತ್ರ ನಿನ್ನ ನೇತ್ರಂಗಳಲಿ ।
ತೊಳಪೆನ್ನ ತುಂಬೆವೆದೆ ನಿನ್ನ ಮುಂಗುರುಳಿನಲಿ ಕಳೆಯಂ ಬೆಳಗುತಿರ್ಪವು ।
ತಿಳಿದೆನೆಲೆ ಕುಟಿಲಾಂಗಿ ತಾರೆನುತ ಮನ್ಮಥಂ।
ಚಳಕದಿಂದೇರ್ಪಡಿಸಿ ಕಟ್ಟಿ ಮಿಗೆ ತೂಗುವೋಲ್ ।
ನಲಿದೋರ್ವನನ್ಯಳಂ ಮತ್ತೋರ್ವಳುಯ್ಯಲೆಯನೇರಿಸಾಡಿಸುತಿರ್ದನು ॥

(೩೯) ಜೀವಸಖನಾದೆನ್ನ ಶಶಿಕಲೆಯನಾಸ್ಯದಲಿ ।
ಕೇವಲೆನ್ನೊಡನಾಡಿ ಸಣ್ಣೆಲರ ಸುಯ್ಲಿನಲಿ ।
ಭಾವೆಯರ್ ಮತ್ಸ್ಯಮಂ ನೇತ್ರದಲ್ಲಳವಡಿಸಿ ಚಂದಳಿರನಿಟ್ಟಧರದೆ ॥
ಠೀವಿಯಿಂದಿರುತಿರ್ಪಿರೀಕ್ಷಣದೊಳೀಯಿರೆಂ-।
ದಾವಸಂತಂ ಬಿಡದೆ ತಿರುಗುತಿಹನೆಂಬಂತೆ ।
ಕೋವಿದನನುಯ್ಯಲೆಯೊಳೇರಿಸುತೆ ಸಖಿಯರೊಡನೋರ್ವಸತಿ ತೂಗುತಿಹಳು ॥

(೪೦) ಆನಗರವೀಥಿಗಳ ಸೌರಂಭವೀಕ್ಷಿಸುತೆ ।
ಭಾನುವಿಮಲದ್ಯುತಿಯೊಳತ್ರಿಜಂ ಶ್ರೀಹರಿಯು ।
ಜಾನದಿಂ ತನ್ನವರನೊಡಗೊಂಡು ಬರುತಿರಲು ಮುಂದೆ ಸಲೆ ಕೆಳೆಯರ್ಕಳಾ ॥
ನ್ಯಾಸವಿಲ್ಲದೆ ಬೆರಸಿಕೊಂಡಾಡುತಿಹ ನೃಪನ-।
ಸೂನು ದತ್ತಾತ್ರೇಯನಂ ಕಂಡು ನಲವೇರ್ದು ।
ಮಾನವೋತ್ತಮನಲ್ತು ಘನಮಹಿಮನೆಂದರಿತು ಬೇಗನಿದಿರ್ವೈತಂದನು ॥

(೪೧) ಮಿರುಪಮಣಿಮಕುಟವಂ ಮಿರುಗಿಸುತೆ ಬಾಲಕಂ ।
ಕರಸಹಸ್ರವನೊಂದಿಸುತ್ತೆ ಸಾಷ್ಟಾಂಗದಿಂ ।
ಚರಣಕ್ಕೆ ನಸುನಗುತೆ ನಮಿಸಲತಿ ಬೆರಗುವಟ್ಟಂತರಿಸಿ ತಿಳಿವುತಾಗ ॥
ಹರುಷಗೊಂಡತ್ರಿಜಂ ಪಿಡಿದೆತ್ತಿ ಮನದಣಿವೊ-।
ಲುರೆ ಪರಸಿ ಬರಸೆಳೆದು ಬಿಗಿಯಪ್ಪಿ ಮುಂಡಾಡಿ ।
ಶಿರವನಾಘ್ರಾಣಿಸುತ್ತಾರಣುಗ ನೀನೆನುತ ನಲ್ನುಡಿಯೊಳುರೆ ಕೇಳಲು ॥

(೪೨) ಜೀಯ ಮಖವೀರ್ಯ ನೃಪನಣುಗನೆನಲಾಗಳನ-।
ಸೂಯೆಯಾತ್ಮಜ ನಗುತ್ತಾನಾರೆನುತ ಚಿಣ್ಣ ।
ಮಾಯೆಯಾಡದೆ ಪೇಳೆನಲಿಕವಂ ಕೈಮುಗಿವುತಾನಂದಪೂರ್ಣನಾದ ।

ಕಾಯಜಾಂತಕ ಮೂರ್ತಿಯಾಭಾಯು ನೀನೆನಲು ।
ವೈಯೊಲದು ಗಲ್ಲಮಂ ಪಿಡಿದಲಗಿ ಮುನಿವರಂ ।
ಪ್ರೀಯದಿಂ ಕೈವಿಡಿದು ಬರುತಿರಲು ಭೂವರಂ ಕಂಡು ಸಭೆಯಿಂದಿಳಿದನು ॥

(೪೩) ಗದಗದಿಸಿ ಕಂಪಿಸುತೆ ಭಯ ಭರಿತ ಭಕ್ತಿಯಿಂ ।
ದಿದಿರ್ವೈದಿ ವೈಯಿಕ್ಕಲೊಡನಾಗಳತ್ರಿಜಂ ।
ಚದುರಿನಿಂದಾತನಂ ಪಿಡಿದೆತ್ತಿ ವೈದಡಹುತರಿಪಿದಂ ಬಿಡು ಭೀತಿಯ ॥
ಮೊದಲೆ ನಿನ್ನರ್ಭಕಂ ಬಲಗೊಂಡು ಸತ್ಕರಿಸಿ ।
ವಿದಿತೋಪಚಾರದಿಂ ಮಿಗೆ ತೃಪ್ತಿಗೊಳಿಸಿಹಂ ।
ಬದಲುಂಟೆ ಸಾಕೆನುತ ಪರಸಲತಿವಿನಯದಿಂದರಮನೆಗೆ ಕರತಂದನು ॥

(೪೪) ವರ ವಜ್ರಗಳ ಭಿತ್ತಿ ಹವಳಗಳ ಪಡಸಾಲೆ ।
ಮರಕತಂಗಳ ಕಂಭ ನೀಲಮಣಿಗಳ ಜಂತೆ ।
ಮೆರೆವ ಮಾಣಿಕ್ಯಗಳ ಹಲಗೆ ಗೋಮೇಧಿಕದ ಬೋದುಗೆಯು ವೈಡೂರ್ಯದಾ॥
ಹರಳುಗಳ್ ಬಿಗಿಗೊಂಡ ಲೋವೆ ವರ ಮೌಕ್ತಿಕದ ।
ಮಿರುಪ ಕೈ ಪುಷ್ಯರಾಗದ ಹೊಸ್ತಿಲಿವುಗಳಿಂ ।
ದುರೆ ಮಂದಿರಂ ದತ್ತಮುನಿಪನಂ ಬಾಯ್ಬಿಡಿಸಿತೇನೆಂಬೆನಚ್ಚರಿಯನು ॥

(೪೫) ಕಳಕೀರ ಕಾಳಿಂಗ ಕಳಕಳನೆ ನುಡಿಸಿದವು ।
ಸುಳಿ ಸುಳಿದು ಶಿಖಿಗಳುರೆ ನರ್ತಿಸಿದವುತ್ತರವೆ ।
ಪಿಳಿಪಿಳಿಲ್ ಪಿಳಿಲೆಂದು ಲಾವಂಗಳುಬ್ಬಿದವು ಪುರುಡಿಸಿ ಕಪೋತಾಳಿಯು ॥
ಕಳಿತೊಂದು ತಾಣದಲಿ ಮೂತಿಯಂ ಮುರುಕಿಸಿದ ।
ವೆಳೆವಲ್ಲಿಗಂಗಳಂ ತಿರುಪುತ್ತೆ ತಲೆಯೆತ್ತಿ ।
ಚಲಿಸಿದವು ಜವ್ವನ ಜನಾದಿಗಳ್ ಜುಣುಗಿದವು ಪೊಸ ಸೊಗಡಿಗತ್ರಿಸುತನಾ ॥

(೪೬) ಆಸನವನಿತ್ತೊಡನೆ ಕುಳ್ಳಿರಿಸಿ ಮುಖವೀರ್ಯ ।
ದಾಸನೋಲ್ ಭಕ್ತಿಯಿಂದಾತನಡಿದಾವರೆಯ ।
ನ್ಯಾಸ ವಿಧ್ಯುಕ್ತದಿಂದರ್ಚಿಸರ್ಘ್ಯವನಿತ್ತು ಕರುಣಾಲವಾಲಶೀಲ ॥
ಈಶ ಬಿಜಯಂಗೆಯ್ದ ಪೋಲಾದುದೆನುತೊಡನೆ ।
ಸೂಸುತಿರೆ ಸುಸ್ನೇಹದುಕ್ತಿಯಿಂದುಪಚರಿಸು ।
ವಾ ಸಮಯಕಾದಿವಾಶ್ರಿನಿಯೆಂಬ ನೃಪನರಸಿ ನಡೆತಂದು ವಂದಿಸಿದಳು ॥

(೪೭) ಮಾಲೆ ಸುಸ್ಥಿರವೆಂದು ಪರಸಿ ದತ್ತಾತ್ರೇಯ ।
ಬಾಲಕಿಯ ಮೊಗನೋಡಿ ಮಮತೆ ಮಧುರೋಕ್ತಿಯಿಂ ।
ಶೀಲೆ ಸುವ್ರತೆಯು ನೀನಾಗಲಿವನುದಿಸಿದಂ ಸಾಸಿರದ ತೋಳ್ ತನಯನು ॥

ಬೇಳುವೆಯ ಮಾತಲ್ಲವೆಲೆಮಗಳೆ ದೇವಾಂಶ ।
ಬಾಲಕಂ ಪುಸಿಯಲ್ತು ದರ್ಶನಾರ್ಥಿಗಳಾಗಿ ।
ಲೀಲೆಯಿಂದೈತಂದೆವಾವಿಂದು ಕಾರಣಗಳುಂಟೆಂದು ನುಡಿಯಲಾಗಿ ॥

(೪೮) ನಿನ್ನ ಪದಪದ್ಮಗಳ ದರ್ಶನವೊದಗುತಿಂದು ।
ನನ್ನಿಯಿಂ ಧನ್ಯನಾದೆಂ ಜೀಯ ಬಾಲಕಂ ।
ಮನ್ನಣೆಯೊಳಾಳ್ದಪನೆ ರಾಜ್ಯಮಂ ಲಕ್ಷಣವನರಿತರಿಪವೇಳ್ಕಿನ್ನಲು ॥
ಇನ್ನರಿಯೆನಾನಿದಂ ಜಗದಾರ್ಯನಹಹರಿಯು ।
ಪನ್ನಿಯಿಂದುದಯಿಸಿದ ಕಾರಣದೆ ಕೇಳ್ ತರುಣಿ ।
ಮನ್ನಣೆಯವರ್ ಬೇರೆ ಯಾರುಂಟಿವನನುಳಿದು ಭೂವಲಯದಲ್ಲನ್ಯರು ॥

(೪೯) ಹರಿಯುಮಿದು ಮಂತ್ರೋಪದೇಶಮಂ ಮಾಡಲಿ-।
ಕ್ಕರಿಗಳಂ ಭೇದಿಪಾಪರಿವಿಡಿಯನರಿಪುವೆಂ ।
ಸರಲೆಸುಗೆ ಬಿಲ್ಗಳಭ್ಯಾಸಮಂ ಕಲಿಸಿದಪೆನಾಕರ್ಷಣಾದಿಯಾಗಿ ॥
ತರಲಗುಪದೇಶಿಪೆಂ ಕರೆದೊಯ್ದು ನಂದನಕೆ ।
ಜರೆದುಕೊಂಡುಮ್ಮಳಿಸ ಬಾಯಾರ್ದುರ್ ತನಯಂಗೆ ।
ಕೊರಗುವಿರೊ ದಂಪತಿಗಳುಸಿರೆಂದರೆದೆನಡುಗಿ ನರನಾಥನಾಕಾಲದೆ ।

(೫೦) ಮೂರರಾಮೋಲೋರ್ವನೆಯ ಬಲವರಿವ ಮುಗ್ಧ-।
ನಾರಿದಕ್ಷೋಕ್ತಿನವರಿಟ್ಟು ಕಟ್ಟಾಡುವುರು ।
ಭಾರ ನಿನಗುಂಟಾದರೀಗಳೇ ಕೇಳ್ ಬಳಿಕವೈದುವನೆ ಎಂತೆನ್ನುತೆ ॥
ಮೂಂದವನಲ್ಲೆಂಟು ಭಾರಿಗಾಂ ದುಗಬಿದ್ದು ।
ತಾರಿಹೆಂ ಪಟ್ಪದಿಯು ತವಪಾದಪದ್ಮಕ್ಕೆ ।
ದಾರಿಯಂ ನೋಡಿ ಮಿಗೆ ನಡಿಸೆಂದನಾನೃಪತಿಯುರೆ ಜೂಜುಗಾರಿಕೆಯುಲಿ ॥

(೫೧) ಜೂಜು ನುಡಿಯೇಕಿಭಂ ಪೋದುದೇ ಹೆಬ್ಬೇದಿ ।
ಮಾಜಲೇಂ ವೈಬದಿಯ ಮೂಲೆಮನೆಯಡರುವುದು ।
ವಾಜಿ ಕಾಲಾಳದರ ಗೋಷ್ಠಿಯಂ ಬಿಡದೆ ಪರಿಹರಿಪುದಾಸುಪ್ರಧಾನ ॥
ರಾಜಸಾಮೀಪ್ಯದಲಿ ನೆಲಸಿಹಂ ಬಿಡೆಕಡೆಗೆ ।
ನೈಜದಿಂ ಸಿದ್ಧಿಪುದಿವನಮನೋರಥವೆಂದು ।
ಮೂಜಗಂ ಪಾಡಾವುದೀತನಾಟವೆಮೇಲು ಚತುರಂಗದಲ್ಲಿನ್ನಲು ॥

(೫೨) ಒಪ್ಪುತಾ ಮುನಿತಿಲಕನುಕ್ತಿಗಂದವನಿಪತಿ-।
ಯೊಪ್ಪಿಸುತೆ ಪಡೆದಾಕೆಯಂ ಪಮಳಿಪರ್ಭಕನ-।
ನೊಪ್ಪಿಸುತೆ ವಿನಯದಿಂ ವಿನ್ಯಮಂ ಕೈಗೊಳಿಸಿರೆಂದುಸುರಿ ಕೂರ್ಮೆಯಿಂದೆ ॥

ತುಪ್ಪ ಕಜ್ಜಾಯದಿಂದನಿಬರಂ ಸಂತೈಸು-।
ತುಪ್ಪರದ ಮರುಕದಿಂ ಪೊರಮಟ್ಟು ಸಾಲ್ಗೊಳಿಸು.।
ತಿಪ್ಪಯಣಮಂ ಮಾಡಿರೆನುತೊಡನೆ ಭಕ್ತಿಯಿಂ ಪದಕೆರಗಿ ಬೀಳ್ಕೊಟ್ಟನು ॥

(೫೩) ವರ ಮುನೀಶ್ವರನಿತ್ತ ನೃಪಜನಂ ಕೈವಿಡಿದು ।
ತೆರಳಲಾಪುರಜನರ್ ಗಜಬಜಿಸಿ ಭಿಕ್ಷುಕಂ ।
ಕರೆದೊಯ್ದನರ್ಭಕನನಾವ ಕಾರಣಮೆಂದು ತಂತಮ್ಮೊಳಗೆ ನುಡಿವುತೆ ॥
ನೆರೆ ನಿರೀಕ್ಷಿಸಿ ತಿರುಗಲಾಗಳಾತನ ಗೆಳೆಯ-।
ರುರುಬುತಿರೆ ಮುನಿಪ ನಿಜ ಶಿಷ್ಯರಿಂದವಘಡಿಸಿ ।
ಜರೆಯಿಸಲು ಜಗುಳಿದರ್ ಚೌದಿಕ್ಕಿಗವರತ್ತ ನಡೆಗೊಂಡರೊಂದಿಗೆಯಲಿ ॥

(೫೪) ಸಾರುತೊಡನೆಡೆಗೆಡೆಗೆ ಸುಕುಮಾರನುಮ್ಮಳಿಸಿ ।
ದಾರಿಯಲಿ ತಿರುತಿರುಗಿ ನಗರಮಂ ನಿಟ್ಟಿಸು-।
ತ್ತೋರೆಗೆಯ ಗೆಳೆಯರಂ ಜನನಿಜನಕಾದ್ಯರಂ ಧ್ಯಾನಿಸುತೆ ಪೊಂಪಳಿದಿರೆ ॥
ಓರೆಗಣ್ಣಿಂದೊಡನೆ ಮುನಿ ನೋಡಿ ನಸು ನಗು-।
ತ್ತೋರೆ ಮಾತೂಹಿಸಿದನೆಲೆ ಚಿಣ್ಣ ಶ್ರೀಹರಿಯ ।
ಮೀರಿ ಬಂದುದಕಿಂತ ನೃಪರಿರ್ಕೆ ಘನವಾಯ್ತೆ ನಿನಗೆ ನೀಂ ನೆನೆ ಪೂರ್ವಮಾ ॥

(೫೫) ಬಿಟ್ಟು ಕಳೆ ಚಿಂತೆಯಂ ನೋಡು ಮುಂದಿಕ್ಕೆಲದ ।
ಬೆಟ್ಟಮಂ ನೀರ್ಝರಿಯ ತರುನಿಚಯಪಲ್ಲವದ ।
ದಟ್ಟಣೆಯ ಪರಿಪರಿಯ ಮೃಗಜಾತಿ ನಿಕರಮಂ ಮತ್ತಮಿತ ಪಕ್ಕಣಗಳ ॥
ಕಟ್ಟಡವಿಚಂಚಲೆಯರುಬ್ಬುಬ್ಬಿ ಬಿದಿರಕ್ಕಿ-।
ಗುಟ್ಟುವುದ ಪಾಡುತ್ತೆ ಕಂಡಲ್ಲೆ ಶಿಖಿಗಳುರೆ ।
ನಿಟ್ಟಿಸುತೆ ನಟಿಸುವುದನಾಸತಿಯರುರು ಪಯೋಧರಗಳುಭಯವನೆದುರಲಿ ॥

(೫೬) ತಿಲಕಮಂ ಕುಡಿಗೊಳಿಸಿ ಪಲವು ಪುಷ್ಪಂಗಳಂ ।
ಸಲೆ ಪೊತ್ತು ಸಲ್ಲಲಿತ ಸೌರಭ್ಯ ಕಲಿತದಿಂ ।
ಫಲವತಿಗಳಾಗುತ್ತೆ ಬಳಗದೊಳ್ ಪ್ರತ್ಯಕ್ಷಮಾಹರಿಯ ಹೃನ್ಮಧ್ಯದೆ ॥
ನೆಲೆಗೊಳಿಸಿ ಚಲಿಸಾಡಿ ಬಳಲಿ ಬಹ ಪಾಂಥರ್ಗೆ ।
ನೆಳಲಾಗಿ ತಂಪಿತ್ತು ವರ ಧರ್ಮ ದೇವತೆಯ ।
ಕಳೆಯಾಂತು ವನಲಕ್ಷ್ಮಿ ತೋರುತಿಹಳೀಂಗ ನೀಂ ಲೇಸಾಗಿ ನೋಡೀಗಳು ॥

(೫೭) ಎಂದು ಮುನಿಯಧ್ವದಲಿ ತೋರುತ್ತೆ ಪೋಗುತಿರೆ ।
ಮಂದಸುಸ್ಮೇರಮಂ ಕುಡಿಯಿಕ್ಕೆ ಕೈ ಮುಗಿಯು-।
ತೆಂದನೊಡನರ್ಭಕಂ ಕೊಡಿರಾಜ್ಞೆಯಂ ಸದೆವೆನೀಮೃಗಗಣಮನೀಗಳೆ ॥

ಪಂದಿಗಂ ಬೇಡಿದಕೆ ತಾವೀಗಳೀಕ್ಷಿಸಿರಿ ।
ಕುಂದು ನೃಪಜಾತಿಗಿದು ಮೃಗಗಳಂ ಕಂಡುಳುಹಿ ।
ಪಿಂಡೆಗೆದು ಗವಿಸುವುದು ನೀತಿಯೇಂ ಪೇಳಿರೆನಲತ್ರಿಜಂ ನಸು ನಗುತ್ತೆ ॥

(೫೮) ಬೇಸರಂ ಪರಿಹರಿಸಲೋಸುಗಂ ಬಳಿಕೈದೆ ।
ರೋಷವಂ ನೀಂ ಗೆಯ್ವ ರಾಜಪುತ್ರರ ಮೈತ್ರಿ ।
ಲೇಸಹುದೆ? ಭಿಕ್ಷುಕರ್ಗರ ವಿತ್ತಮನ್ನೈದೆ ಕೊಂಬವಿವು ಮಾಟೆಂದಿಗೆ ॥
ಬಾ ಸುಮಾರ್ಗವನಾಂತು ತೋರ್ಪುದೆಮ್ಮಾಶ್ರಮಂ ।
ಭೂಸುರರ ಸಂಸರ್ಗ ಮೈಗೊಂಬುದಿನ್ನಿಲ್ಲಿ ।
ಸೂಸು ರವಿಗರ್ಘ್ಯಮಂ ಮುಳುಗುತಿಹ ನೋಡೆನುತೆ ಸಾರಿದಂ ಜಾಹ್ನವಿಯನು ॥

(೫೯) ಕಂಗೊಳಿಸುವಾವರ್ತ ನಾಭಿಯಿಂದುರೆ ಶಿಥಿಲ ।
ಭಂಗಗಳ ತ್ರಿವಳಿಯಿಂದುತ್ಕೃಷ್ಟವಾದ ಕಮ- ।
ಠಂಗಳುರು ಕಾಠಿಣ್ಯ ಕುಚಗಳಿಂದನುಕೂಲ ಪುಳಿನಂಗಳುರು ಜಘನದಾ ॥
ರಂಗಿನಿಂದುಜ್ವಲದೆ ಮಿಗೆ ಪೊಳೆವ ಮತ್ಸ್ಯ ನಯ- ।
ನಂಗಳಿಂ ಬೊಬ್ಬುಳಿಯ ಸಮ್ಸ್ಫೋಷ ಹಸ್ತದಿಂ ।
ಗಂಗೆ ತರುಣಾಂಗೆ ಮೋಕ್ಷಾಂಗನೆ ಬೆಡಂಗಿನಿಂ ಮುಂಗಡೆಗೆ ಕಂಗೆಸೆದಳು ॥

(೬೦) ಸ್ನಾನದಿಂದಮಲಸಂಧ್ಯಾನದಿಂ ಜಪದ ಸ- ।
ನ್ಮಾನದಿಂ ಕೇಳ್ವ ಪೌರಾಣದಿಂ ಬೋಧಿಪಾ ।
ಜ್ಞಾನದಿಂ ಕೊಡುವ ಗೋದಾನದಿಂ ಪೂಜೆಯ ವಿಧಾನದಿಂ ನಿಗಮಂಗಳಾ ॥
ಗಾನದಿಂ ಮಾರುತನ ಪಾನದಿಂದೈದುವ ವಿ- ।
ಮಾನದಿಂ ಭಸ್ಮಪರಿಧಾನದಿಂ ಪೂಜಾಗ್ನಿ ।
ಶಾನೆಯಿಂ ಕುಳಿತೆಲ್ಲ ತಾಣದಿಂ ಯತಿಗಳನಿಧಾನದಿಂ ತೀರಮೆಸೆಯೆ ॥

(೬೧) ಉತ್ಕಮಾಮೋದದಿಂ ಸುಕುಮಾರ ಮುನಿಗಳ್ಗೆ ।
ಮಿಕ್ಕಿದತಿ ಶೀಲದಿಂ ವಾರಿಯುಂ ಮೊಗೆದು ಮಿಗೆ ।
ಮುಕ್ಕಳಿಸಿ ಕರಪಾದಮಂ ತೊಳೆದು ಮಾರ್ತಾಂಡಗರ್ಘ್ಯಮಂ ಸೂಸುತಿರದೆ ॥
ಮುಗ್ಗಳಾಟಿಕೆಯನುರೆ ಮಾಜಿಕೊಂಡತ್ರಿಜನ ।
ಶಿಕ್ಷೆಯಲಿ ಪುಣ್ಯಾಶ್ರಮವನೊಡನೆ ಚಳಕದಿಂ ।
ಪೊಕ್ಕನತಿ ಸಡಗರದೆ ಗೋಧೂಳಿ ಲಗ್ನದಲಿ ಶತ್ರುಘ್ನ ಕೇಳೆಂದನು ॥

(೬೨) ಕಂಡವರ್ ಬೆರಗಾದರೀತನಾಕಾರಮಂ ।
ಚಂಡರುಚಿಯಾನ್ವಿತತರಣಿಯಂತೆ ಕರಗಳುರು- ।
ಹಿಂಡಿನಾಮಹಿಮೆಯುಮನೈತಂದ ವಿಶ್ವಭುಜನೆಂದರಿತು ಕೈಮುಗಿವುತೆ ॥

ಕಾಯಜಾಂತಕ ಮೂರ್ತಿಯಾಭಾಯ ನೀನೆನಲು ।
ಮೈಯೊಲದು ಗಲ್ಲಮಂ ಪಿಡಿದಲಗಿ ಮುನಿವರಂ ।
ಪ್ರೀಯದಿಂ ಕೈವಿಡಿದು ಬರುತಿರಲು ಭೂವರಂ ಕಂಡು ಸಭೆಯಿಂದಿಳಿದನು ॥

(೪೩) ಗದಗದಿಸಿ ಕಂಪಿಸುತೆ ಭಯ ಭರಿತ ಭಕ್ತಿಯಿಂ-।
ದಿದಿರ್ವೈದಿ ಮೈಯಿಕ್ಕಲೊಡನಾಗಳತ್ರಿಜಂ ।
ಚಮರಿನಿಂದಾತನಂ ಪಿಡಿದೆತ್ತಿ ಮೈದಡಹುತರುಪಿದಂ ಬಿಡು ಭೀತಿಯ ॥
ಮೊದಲೆ ನಿನ್ನರ್ಭಕಂ ಬಲಗೊಂಡು ಸತ್ಕರಿಸಿ ।
ವಿದಿತೋಪಚಾರದಿಂ ಮಿಗೆ ತೃಪ್ತಿಗೊಳಿಸಿಹಂ ।
ಬದಲುಂಟೆ ಸಾಕೆನುತ ಪರಸಲತಿವಿನಯದಿಂದರಮನೆಗೆ ಕರತಂದನು ॥

(೪೪) ವರ ವಜ್ರಗಳ ಭಿತ್ತಿ ಪವಳಗಳ ಪಡಸಾಲೆ ।
ಮರಕತಂಗಳ ಕಂಭ ನೀಲಮಣಿಗಳ ಜಂತೆ ।
ಮೆರೆವ ಮಾಣಿಕ್ಯಗಳ ಹಲಗೆ ಗೋಮೇಧಿಕದ ಬೋದುಗೆಯು ವೈಡೂರ್ಯದಾ॥
ಹರಳುಗಳ್ ಬಿಗಿಗೊಂಡ ಲೋವೆ ವರ ಮೌಕ್ತಿಕದ ।
ಸರದ ಕೈ ಪುಷ್ಯರಾಗದ ಹೊಸ್ತಿಲಿವುಗಳಿಂ-।
ದುರೆ ಮಂದಿರಂ ದತ್ತಮುನಿಪನಂ ಬಾಯ್ಬಿಡಿಸಿತೇನೆಂಬೆನಚ್ಚರಿಯನು ॥

(೪೫) ಕಳಕೀರ ಕಾಳಿಂಗ ಕಳಕಳನೆ ನುಡಿಸಿದವು ।
ಸುಳಿ ಸುಳಿದು ಶಿಖಿಗಳುರೆ ನರ್ತಿಸಿದವೊತ್ತರವೆ ।
ಪಿಳಿಪಿಳಿಲ್ ಪಿಳಿಲೆಂದು ಲಾವಂಗಳುಬ್ಬಿದವು ಪುರುಡಿಸಿ ಕಪೋತಾಳಿಯು ॥
ಕಳಿತೊಂದು ತಾಣದಲಿ ಮೂತಿಯಂ ಮುರುಕಿಸಿದ-।
ವೆಳೆವುಲ್ಲೆಗಂಗಳಂ ಕಿರುಪುತ್ತೆ ತಲೆಯೆತ್ತಿ ।
ಚಲಿಸಿದವು ಜವ್ವನ ಜವಾದಿಗಳ್ ಜುಣುಗಿದವು ಪೊಸ ಸೊಗಡಿಗತ್ರಿಸುತನಾ ॥

(೪೬) ಆಸನವನಿತ್ತೊಡನೆ ಕುಳ್ಳಿರಿಸಿ ಮಖವೀರ್ಯ ।
ದಾಸನೋಲ್ ಭಕ್ತಿಯಿಂದಾತನಡಿದಾವರೆಯ ।
ನ್ಯಾಸ ವಿಧ್ಯುಕ್ತದಿಂದರ್ಚಿಸಪರ್ಯೆವನಿತ್ತು ಕರುಣಾಲವಾಲಶೀಲ ॥
ಈಶ ಬಿಜಯಂಗೆಯ್ದ ಪ್ರೋಲಾದುದೆನುತೊಡನೆ ।
ಸೂಸುತುರೆ ಸುಸ್ನೇಹದುಕ್ತಿಯಿಂದುಪಚರಿಸು-।
ವಾ ಸಮಯಕಾದಿಮಾಶ್ವಿನಿಯೆಂಬ ನೃಪನರಸಿ ನಡೆತಂದು ವಂದಿಸಿದಳು ॥

(೪೭) ಮಾಲೆ ಸುಸ್ಥಿರವೆಂದು ಪರಸಿ ದತ್ತಾತ್ರೇಯ ।
ಬಾಲಕಿಯ ಮೊಗನೋಡಿ ಮಮತೆ ಮಧುರೋಕ್ತಿಯಿಂ ।
ಶೀಲೆ ಸುವ್ರತೆಯು ನೀನಾಗಲಿವನುದಿಸಿದಂ ಸಾಸಿರದ ತೋಳ್ ತನಯನು ॥

ಬೇಳುವೆಯ ಮಾತಲ್ಲವೆಲೆಮಗಳೆ ದೇವಾಂಶ।
ಬಾಲಕಂ ಪುಸಿಯಲ್ತು ದರ್ಶನಾರ್ಥಿಗಳಾಗಿ।
ಲೀಲೆಯಿಂದ್ವೈತಂದೆವಾವಿಂದು ಕಾರಣಗಳುಂಟೆಂದು ನುಡಿಯಲಾಗಿ ॥

(೪೮) ನಿನ್ನ ಪದಪದ್ಮಗಳ ದರ್ಶನವೊದಗುತಿಂದು।
ನನ್ನಿಯಿಂ ಧನ್ಯನಾದೆಂ ಜೀಯ ಬಾಲಕಂ।
ಮನ್ನಣೆಯೊಳಾಳ್ದಪನೆ ರಾಜ್ಯಮಂ ಲಕ್ಷಣವನರಿತರಿಪವೇಳ್ಕೆನ್ನಲು ॥
ಇನ್ನರಿಯೆನಾನಿದಂ ಜಗದಾರ್ಯನಹಹರಿಯ।
ಸನ್ನೆಯಿಂದುದಯಿಸಿದ ಕಾರಣದೆ ಕೇಳ್ ತರುಣಿ।
ಮನ್ನಣೆಯುವರ್ ಬೇರೆ ಯಾರುಂಟೆವನನುಳಿದು ಭೂವಲಯದಲ್ಲನ್ಯರು ॥

(೪೯) ಹರಿಯುವಿದು ಮಂತ್ರೋಪದೇಶಮಂ ಮಾಡಲಿ-।
ಕ್ಕರಿಗಳಂ ಭೇದಿಪಾಪವಿಡಿಯನರಿಪುವೆಂ।
ಪರಲೆಸುಗೆ ಬಿಲ್ಗಳಭ್ಯಾಸಮಂ ಕಲಿಸಿದಪೆನಾಕರ್ಷಣಾದಿಯಾಗಿ ॥
ತರಲಗುಪದೇಶಿಪೆಂ ಕರೆನೊಯ್ವೆ ನಂದನಕೆ।
ಜರೆದುಕೊಂಡುಮ್ಮಳಿಸಿ ಬಾಯಾರ್ದುದ ತನಯಂಗೆ।
ಕೊರಗುವಿರೊ ದಂಪತಿಗಳುಸಿರೆಂದರೆದೆನಡುಗಿ ನರನಾಥನಾಕಾಲದೆ।

(೫೦) ಮೂರರಾಮೋಲೋರ್ವನೆಯ ಬಲವರಿವ ಮಾರ್ಗ-।
ನಾರಿದಕ್ಕೊಕ್ತಿನವರಿಟ್ಟು ಕಟ್ಟಾಡುವುರು।
ಭಾರ ನಿನಗುಂಟಾದರೀಗಳೇ ಕೇಳ್ ಬಳಿಕವೈದುವನೆ ಎಂತೆನ್ನುತೆ ॥
ಮೊಂದವನಲ್ಲಿಂಟು ಭಾರಿಗಾಂ ದುಗಬಿದ್ದು।
ತಾರಿಹೆಂ ಷಟ್ಪದಿಯು ತವಪಾದಪದ್ಮಕ್ಕೆ।
ದಾರಿಯಂ ನೋಡಿ ಮಿಗೆ ನಡಿಸೆಂದನಾನೃಪತಿಯುರಿ ಜೂಜುಗಾರಿಕೆಯಲಿ ॥

(೫೧) ಜೂಜು ನುಡಿಯೇಕಿಭಂ ಪೋದುದೇ ಹೆಬ್ಬೀದಿ।
ಮಾಜಲೇಂ ವೈಬದಿಯ ಮೂಲೆವನೆಯಡರುವುದು।
ವಾಜಿ ಕಾಲಾಳದರ ಗೋಷ್ಠಿಯಂ ಬಿಡದೆ ಪರಿಹರಿಪುದಾಪುಪ್ರಥಾನ ॥
ರಾಜಸಾಮ್ರಾಜ್ಯದಲಿ ನೆಲಸಿಹಂ ಬಿಡೆಕಡೆಗೆ।
ನೈಜದಿಂ ಸಿದ್ಧಿಪುದಿವನಮನೋರಥವೆಂದು।
ಮೂಜಗಂ ಪಾಡಾವುದೀತನಾಟವೆಮೇಲು ಚತುರಂಗದಲ್ಲೆನ್ನಲು ॥

(೫೨) ಒಪ್ಪುತಾ ಮುನಿತಿಲಕನುಕ್ತಿಗಂದವನಿಪತಿ-।
ಯೊಪ್ಪಿಸುತೆ ಪಡೆದಾಕೆಯಂ ಪಮಳಪರ್ಭಕನ-।
ನೊಪ್ಪಿಸುತೆ ವಿನಯದಿಂ ವಿದ್ಯವಂ ಕೈಗೊಳಿಪರೆಂದುಸುರಿ ಕೂರ್ಮೆಯಿಂದೆ ॥

ತುಪ್ಪ ಕಜ್ಜಾಯದಿಂದನಿಬರಂ ಸಂತೈಸು-।
ತುಪ್ಪರದ ಮರುಕದಿಂ ಪೊರಮಟ್ಟು ಸಾಲ್ಗೊಳಿಸು।
ಶಿಷ್ಯಯಣಮಂ ಮಾಡಿರೆನುತೊಡನೆ ಭಕ್ತಿಯಿಂ ಪದಕೆರಗಿ ಬೀಳ್ಕೊಟ್ಟನು ॥

(೫೩) ವರ ಮುನೀಶ್ವರನಿತ್ತ ನೃಪಜನಂ ಕೈವಿಡಿದು ।
ತೆರಳಲಾಪುರಜನರ್ ಗಜಬಜಿಸಿ ಭಿಕ್ಷುಕಂ ।
ಕರೆದೊಯ್ದನರ್ಭಕನನಾವ ಕಾರಣಮೆಂದು ತಂತಮ್ಮೊಳಗೆ ನುಡಿವುತೆ ॥
ನೆರೆ ನಿರೀಕ್ಷಿಸಿ ತಿರುಗಲಾಗಳಾತನ ಗೆಳೆಯ-।
ರುರುಬುತಿರೆ ಮುನಿಪ ನಿಜ ಶಿಷ್ಯರಿಂದವಘಡಿಸಿ ।
ಜರೆಯಿಸಲು ಜಗುಳಿದರ್ ಚೌದಿಕ್ಕಿಗವರತ್ತ ನಡೆಗೊಂಡರೊಂದಿಗೆಯಲಿ ॥

(೫೪) ಸಾರುತೊಡನೆಡೆಗೆಡೆಗೆ ಸುಕುಮಾರನುಮ್ಮಳಿಸಿ ।
ದಾರಿಯಲಿ ತಿರುತಿರುಗಿ ನಗರಮಂ ನಿಟ್ಟಿಸು-।
ತ್ತೂರಿಗೆಯ ಗೆಳೆಯರಂ ಜನನಿಜನಕಾದ್ಯರಂ ಧ್ಯಾನಿಸುತೆ ಪೊಂಪಳಿದಿರೆ ॥
ಓರೆಗಣ್ಣಿಂದೊಡನೆ ಮುನಿ ನೋಡಿ ನಸು ನಗು-।
ತ್ತೀರ ಮಾತೂಹಿಸಿದನೆಲೆ ಚಿಣ್ಣ ಶ್ರೀಹರಿಯ ।
ಮೀರಿ ಬಂದುದಕಿಂತ ನೃಪಸಿರ್ಕೆ ಘನವಾಯ್ತೆ ನಿನಗೆ ನೀಂ ನೆನೆ ಪೂರ್ವಮಾ ॥

(೫೫) ಬಿಟ್ಟು ಕಳೆ ಚಿಂತೆಯಂ ನೋಡು ಮುಂದಿಕ್ಕೆಲದ ।
ಬೆಟ್ಟಮಂ ನಿರ್ಝರಿಯ ತರುನಿಚಯಪಲ್ಲವದ ।
ದಟ್ಟಣೆಯ ಪರಿಪರಿಯ ಮೃಗಜಾತಿ ನಿಕರಮಂ ಮತ್ತಮಿತ ಪಕ್ಕಣಗಳ ॥
ಕಟ್ಟಡವಿಚಂಚಲೆಯುರುಬ್ಬುಬ್ಬಿ ಬಿದಿರಕ್ಕಿ-।
ಗುಟ್ಟುವ್ವದ ಪಾಡುತ್ತೆ ಕಂಡಲ್ಲೈ ಶಿಖಿಗಳುರೆ ।
ನಿಟ್ಟಿಸುತೆ ನಟಿಸುವುದನಾಸತಿಯುರುರು ಪಯೋಧರಗಳುಭಯವನೆದುರಲಿ ॥

(೫೬) ತಿಲಕಮಂ ಕುಡಿಗೊಳಿಸಿ ಪಲವು ಪುಷ್ಪಂಗಳಂ ।
ಸಲೆ ಪೊತ್ತು ಸಲ್ಲಲಿತ ಸೌರಭ್ಯ ಕಲಿತದಿಂ ।
ಫಲವತಿಗಳಾಗುತ್ತೆ ಬಳಗದೊಳ್ ಪ್ರತ್ಯಕ್ಷಮಾಹರಿಯ ಹೃನ್ಮಧ್ಯದೆ ॥
ನೆಲೆಗೊಳಿಸಿ ಚಲಿಸಾಡಿ ಬಳಲಿ ಬಹ ಪಾಂಥರ್ಗೆ ।
ನೆಳಲಾಗಿ ತಂಪಿತ್ತು ವರ ಧರ್ಮ ದೇವತೆಯ ।
ಕಳೆಯಾಂತು ವನಲಕ್ಷ್ಮಿ ತೋರುತಿಹಳಣುಗ ನೀಂ ಲೇಸಾಗಿ ನೋಡೀಗಳು ॥

(೫೭) ಎಂದು ಮುನಿಯಧ್ವದಲಿ ತೋರುತ್ತೆ ಪೋಗುತಿರೆ ।
ಮಂದಸ್ಮೇರಮಂ ಕುಡಿಯಿಕ್ಕಿ ಕೈ ಮುಗಿಯು-।
ತೆಂದನೊಡನರ್ಭಕಂ ಕೊಡಿರಾಜ್ಞೆಯಂ ಸದೆವೆನೀಮೃಗಗಣವನೀಗಳೆ ॥

ಸಂದಿಗಂ ಬೇಡಿದಕೆ ತಾವೀಗಳೀಕ್ಷಿಸಿರಿ ।
ಕುಂದು ನೃಪಜಾತಿಗಿದು ಮೃಗಗಳಂ ಕಂಡುಳುಹಿ ।
ಪಿಂಡೆಗೆಡು ಗವಿಸುವುದು ನೀತಿಯೊಂ ಪೇಳಿರೆನಲತ್ರಿಜಂ ನಸು ನಗುತ್ತೆ ॥

(೫೮) ಬೇಸರಂ ಪರಿಹರಿಸಲೋಸುಗಂ ಬಳಿಸೈದೆ ।
ದೋಷಮಂ ನೀಂ ಗೆಯ್ವೆ ರಾಜಪುತ್ರರ ವೃತ್ತಿ ।
ಲೇಸಹುದೆ? ಭಿಕ್ಷುಕರ್ಗಾರ ವಿತ್ತಮನೈದೆ ಕೊಂಬವಿವು ಮಾಣೆಂದಿಗೆ ॥
ಬಾ ಸುಮಾರ್ಗಮನಾಂತು ತೋರ್ಪುದೆಮ್ಮಾಶ್ರಮಮಂ ।
ಭೂಸುರರ ಸಂಸರ್ಗ ವೈಗೊಂಬುದಿನ್ನಿಲ್ಲಿ ।
ಸೂಸು ರವಿಗರ್ಘ್ಯಮಂ ಮುಳುಗುತಿಹ ನೋಡೆನುತೆ ಸಾರಿದಂ ಜಾನ್ಹವಿಯನು ॥

(೫೯) ಕಂಗೊಳಿಸುವಾವರ್ತ ನಾಭಿಯಿಂದುರೆ ಶಿಥಿಲ ।
ಭಂಗಗಳ ತ್ರಿವಳಿಯಿಂದುತ್ಕೃಷ್ಟಮಾದ ಕಮ-।
ಠಂಗಳುರು ಕಾಠಿಣ್ಯ ಕುಚಗಳಿಂದನುಕೂಲ ಪುಳಿನಂಗಳುರು ಜಘನದಾ ॥
ರಂಗಿನಿಂದುಜ್ವಲದೆ ಮಿಗೆ ಪೊಳೆವ ಮತ್ಸ್ಯ ನಯ-।
ನಂಗಳಿಂ ಬೊಬ್ಬುಳಿಯ ಸಮ್ಲೋಷ ಹಸ್ತದಿಂ ।
ಗಂಗೆ ತರುಣಾಂಗೆ ಮೋಕ್ಷಾಂಗನೆ ಜಡಂಗಿನಿಂ ಮುಂಗಡೆಗೆ ಕಂಗೆಸೆವಳು ॥

(೬೦) ಸ್ನಾನದಿಂದಮಲಸಂಧ್ಯಾನದಿಂ ಜಪದ ಸ-।
ಸ್ಮಾನದಿಂ ಕೇಳ್ವ ಪೌರಾಣದಿಂ ಬೋಧಿಪಾ ।
ಜ್ಞಾನದಿಂ ಕೊಡುವ ಗೋದಾನದಿಂ ಪೂಜೆಯ ವಿಧಾನದಿಂ ನಿಗಮಂಗಳಾ ॥
ಗಾನದಿಂ ಮಾರುತನ ಪಾನದಿಂದೈದುವ ವಿ-।
ಮಾನದಿಂ ಭಸ್ಮಪರಿಧಾನದಿಂ ಪೂಜಾಗ್ನಿ ।
ಶಾನೆಯಿಂ ಕುಳಿತೆಲ್ಲ ತಾಣದಿಂ ಯತಿಗಳನಿಧಾನದಿಂ ತೀರಮೆಸೆಯೆ ॥

(೬೧) ಉಕ್ಕವಾಮೋದದಿಂ ಸುಕುಮಾರ ಮುನಿಗಳ್ಗೆ ।
ಮಿಕ್ಕಿದತಿ ಶೀಲದಿಂ ವಾರಿಯಂ ಮೊಗೆದು ಮಿಗೆ ।
ಮುಕ್ಕಳಿಸಿ ಕರಪಾದಮಂ ತೊಳೆದು ಮಾರ್ತಾಂಡಗರ್ಘ್ಯಮಂ ಸೂಸುತಿರಡೆ ॥
ಮಕ್ಕಳಾಟಿಕೆಯನುರೆ ಮಾಜಿಕೊಂಡತ್ರಿಜನ ।
ತೆಕ್ಕೆಯಲಿ ಪುಣ್ಯಾಶ್ರಮವನೊಡನೆ ಚಳಕದಿಂ ।
ಪೊಕ್ಕನತಿ ಸಡಗರದೆ ಗೋಧೂಳಿ ಲಗ್ನದಲಿ ಶತ್ರುಘ್ನ ಕೇಳೆಂದನು ॥

(೬೨) ಕಂಡವರ್ ಬೆರಗಾದರೀತನಾಕಾರಮಂ ।
ಚಂಡರುಚಿಯಾನ್ವಿತತರಣಿಯಂತೆ ಕರಗಳುರು-।
ಹಿಂಡಿನಾಮಹಿಮೆಯುಮನೈತಂದ ವಿಶ್ವಭುಜನೆಂದರಿತು ಕೈಮುಗಿವುತೆ ॥

ತಂಡತಂಡದೊಳೆರಗಲೈತಹ ಮಹಾತ್ಮರ್ಗೆ ।
ಮಂಡಲಾಧಿಪಸುತಂ ತಾನೆನುತೆ ಸೂಚಿಸೊಡ-।
ವಂಡಿಸದೆ ತಾನವರ್ಗೆರಗುತ್ತೆ ಪರಿಕೆಯಂ ಕೈಕೊಳುತೆ ಬರೆ ಹರುಷದೆ ॥

(೬೩) ಎಲ್ಲಿಯುಂ ಮೊಳಗುತಿಹ ನಿಗಮಶಾಸ್ತ್ರಂಗಳಂ-।
ದೆಲ್ಲಿಯುಂ ತಪ್ಪದೆ ಮುನೀವಧುಗಳಾಚರಿಪ ।
ಸಲ್ಲಲಿತ ಗೋಪದ್ಮಗೌರೀವ್ರತಾದಿಗಳ ಕಥೆಗಳುದ್ಯಾಪನೆಗಳಾ ॥
ಎಲ್ಲಿಯುಂ ಪಾಡುತಿಹ ಧವಳ ಶೋಭಾನೆಗಳ-।
ನೆಲ್ಲಮಂ ತ್ರಿಗುಣಾತ್ಮ ತೋರುತ್ತೆ ಮಂಜುಳ ಸು-।
ಪಲ್ಲವನಿಕೇತನವನೊಳಪೊಕ್ಕು ನಮಿಸಿದಂ ಪಡೆದಬ್ಬೆಗಣಾಗನೊಡನೆ ॥

(೬೪) ಪರಸಿ ಮಗೆ ತಕ್ಕೈಸುತಾ ಜನನಿ ದತ್ತನಂ ।
ಮರುಕೊಳಿಸಿ ಬಾಲಕನನೀಕ್ಷಿಸುತೆ ಪ್ರತ್ಯಕ್ಷ ।
ತರಣಿಯಂ ಕೂಡಿಕೊಂಡೈತಂದನಣಾಗನೆನುತನುಮಾನಿಸಾಸುವ್ರತೆ ॥
ಕರವ ಮುಗಿಯಲ್ಕಾಗಳಾವರ್ಣಿಯುರೆ ಮತ್ತೆ ।
ದರಹಾಸಮಂ ಮೊಗಸಲದಕಾಕೆ ತನ್ನಲ್ಲಿ ।
ಮರೆಮಾಜಿಕೊಂಡಿರ್ಪನೆಂದೈದೆ ಮಗುಳೆಮಗುಳಾತನಂ ನಿಟ್ಟಿಸಿದಳು ॥

(೬೫) ಈತನಾರೆಂದೆನುತ ಬೆಸಗೊಳ್ಳಲನಸೂಯೆ-।
ಗಾತಪೋನಿಧಿ ನುಡಿದ ಮಖವೀರ್ಯ ಭೂಮಿಪನ ।
ಜಾತನೆಃದಡಿಗಳ್ಗೆ ಮಣಿಸಲುರೆ ವೈದಡಹುತಳ್ಕರಿಂದಾಯುಶಸ್ವಿ ॥
ಚೂತಫಲಧವಳೇಕ್ಷುದಾಡಿಮಂ ಷಡ್ರಸೋ-।
ಪೇತಮಹ ಚಿತ್ರಾನ್ನ ಸರ್ವದಿಂದುಪಚರಿಸಿ ।
ಮಾತೆಯುಂ ಮರಿಸಿದಳ್ ಬೊಬ್ಬೂರ ರಾಮನಂ ನೆನೆಯುತಾಮುರಿಮಗಂಗೆ ॥

*(೬೬) ವಸುಧೆಯಲಿ ವೇದಾವತೀ ನದೀ ತೀರದ-।
ಲ್ಲೆಸೆಯುತಿಹ ಬೊಬ್ಬೂರ ರಂಗಪ್ಪ ಮೊದಲು ವಿರ-।
ಚಿಸಿದೀ ಪರಶುರಾಮ ರಾಮಾಯಣದಲಿ ಶೋಭಿಪ ಚತುರ್ಥೋಧ್ಯಾಯದೆ ॥
ಪಸರಿಸಿಹ ಋತುವೈರಿ ಪದ್ಯಮಂ ಪಶ್ಚಿಮದ ।
ವಿಷಧಿತೀರದ ಕಡೇಕೋಡಿ ಪರಮಯ್ಯನಾ-।
ರಸಪುತ್ರ ವೆಂಕಪ್ಪ ಶೋಧಿಸುತೆ ತಿದ್ದಿದಂ ಶ್ರೀನಿವಾಸನ ಕರುಣದೆ ॥

ಅಂತೂ ಅಧ್ಯಾಯ ೪ ಕ್ಕೆ ಪದ್ಯ ೧೯೯ ಕ್ಕೆ ಮಂಗಳಮಸ್ತು.

# ೫ ನೆಯ ಅಧ್ಯಾಯ.

ಸೂಚನೆ॥ ಅನಸೂಯೆಯಾತ್ಮಜನ ಶಿಕ್ಷೆಯಿಂ ಕ್ರತುವೀರ್ಯ-।
ನಣುಗನಹ ವೀರ್ಯಾರ್ಜುನಂ ಧನುರ್ವಿದ್ಯೆಯಂ ।
ಮನವೊಲ್ದು ಮಂತ್ರತಂತ್ರಂಗಳಂ ಕಲಿತು ಮಿಗೆ ಬೆಳಗಿದಂ ಗುರುಸದನದೆ ॥

(೧) ಕೈಕೆಯಾತ್ಮಜನೆ ಕೇಳ್ ಮುಂದಣ ಕಥಾಮೃತವ-।
ನಾಕುಮಾರಂ ಬಂದ ಮರುದಿನದೆ ಭಾಸ್ಕರಂ।
ಲೋಕಮಂ ಬೆಳಗಲುರೆ ಪೂರ್ವದಿಗ್ವಧುವಿನಾ-ಭೈತಲೆಯ ಮಾಣಿಕ್ಯದ ॥
ವೈಖರಿಯು ತೊಡವಿನೊಲು ಝಗಝಗಿಸುತುದಯಿಸಲ್ ।
ಶ್ರೀಕರ ಕಮಂಡಲಂಗಳನಾಂತ ಮುನಿಗಳ್ ವಿ-।
ವೇಕದಿಂ ಗಂಗೆಯಂ ಬಲಗೊಂಡರಜಹರಿಹರರನ್ನೈದೆ ಜಾನಿಸುತ್ತೆ ॥

(೨) ಪಸುಳೆಯೊಡನಾಗಳಾ-ಯೋಗಿಶಾರ್ದೂಲನಾ-।
ವಿಷಜಬಾಂಧವನುದಿಸೆ ತನ್ಮಾಸ್ಯ ವಲಯಮಂ।
ಕುಶಲತ್ವದಿಂ ಮುಕುರದಲ್ಲೀಕ್ಷಿಸುತ್ತದಂ ಕಂಡೊಡನೆ ನಲಿವಂದದೆ ॥
ನಸುನಕ್ಕು ನಿಟ್ಟಿಸುತೆ ಶಂಕರಂ ಶಿಖಿನೇತ್ರ-।
ದಸಮುಕಡು ತಾಪದಿಂ ಗಂಗೆಗಭಿಮುಖವಾಗಿ।
ಬೆಸಗೊಳ್ವಲೈತರ್ಪನೆಂಬಂತೆ ಗಮಿಸಿದಂ ಶಿಷ್ಯಾಳಿಯೊರಕದಿಂದೆ ॥

(೩) ವಟುನಿವಹಮಖಿಲಕನ್ನೆಯರಾಗ ಯೋಗಿನೀ-।
ಕಟಕಮುರೆ ಸಂದಣಿಸಲಂದೈದೆ ತೀರದಲಿ।
ಚಟುಲರವಿರಶ್ಮಿಗಳನೊತ್ತರದೆ ಕೆತ್ತುಮತಿರುಚಿಗಳುರುದಶನಾಳಿಯು ॥
ಕಟಹಾಯುಮಾ ಕಣ್ಣದಿರ್ ತಣ್ಣದಿರಿನೊಲುರೆ।
ಸುಟಿಯುಳಿದ ಕುಮುದಮಂ ನಲಿಸುತ್ತೆ ಕರಗಿಸ-।
ಸ್ಫುಟ ಚಂದ್ರಕಾಂತ ಸೋಪಾನಗಳ ಪಂಕ್ತಿಯೊಳ್ ನೆರೆಹಿದವು ಚಕ್ರಾಳಿಯು ॥

(೪) ಗಂಗೆಯೊಳ್ ಮುಳುಗಿ ಮಿಂಯುತೆ ಮಡಿಯನುಟ್ಟುರೆ ಬೆ-।
ಡಂಗಿನಿಂ ತ್ರಿಗುಣಾತ್ಮನೊಡನಮಲ ನಿತ್ಯ ಕ-।
ರ್ಮಂಗಳಂ ತೀರ್ಚುತಾತರಲನಂ ಕೂಡಿಕೊಂಡೈದುತ್ತೆ ಬೀಡಾರಕೆ ॥
ಮಂಗಳಾಂಗನನಾದಿಯೊಳ್ ಸಕಲ ಕುಸುಮ ಸುಫ-।
ಲಂಗಳಿಂ ಪದ್ಧತಿಯಿನಾತನಿಂ ಪೂಜಿಸಿ ಕ-।
ರಂಗಳಂ ಮುಗಿಸಿದಿರ್ ಕುಳ್ಳಿರಿಸಿ ಮೊಳಗಿಸಿದನೋಂಕಾರಮಂ ಪ್ರಥಮದೆ ॥

(೫) ವೇದಗಳನರಿಪಿದಂ ಮಿಗೆ ಶಿದ್ಧಿ ಸ್ವರಗಳಂ।
ಮೋದದಿಂ ಶಾಸ್ತ್ರೋಪದೇಶಮಂ ಗೆಯ್ದೊಡನೆ।
ವೈದಿಕ ವಿಧಾನದಲ್ಲನುಭವಮನೆಸಗಿ ಪದಿನೆಂಟು ಪೌರಾಣಂಗಳ ॥

ಭೇದಮಂ ತಿಳುಪಿದಂ ನ್ಯಾಸಮಂ ಧ್ಯಾನಮಂ ।
ಬೋಧಿಸುತ್ತ ಕ್ಷಣಾಭ್ಯಾಸಮಂ ಸಾಧು ತಃ-।
ನೋದಿಸಿದನನ್ನೆಗಂ ಪರಿಪರಿಯ ಮಂತ್ರತಂತ್ರಂಗಳಂ ಪೇಳ್ದವಂಗೆ ॥

(೬) ಚಮರಿಕುರೆ ಗಳರವಂ ಪಾಠಮಂ ಪಠಿಸುತಿರೆ ।
ಕದಪನಾಮುನಿ ಬೆರಲ್ಗಳಿನ್ನೈದೆ ಪಿಡಿಯೆ ಮೂ-।
ಡಿದವು ಪಲ್ಲವದಂತೆ ಬಾಲಂಗೆ ಕದಪುಗಳೊಳಾಬೆರಲ್ಗಳ್ ಮಿರುಗುತೆ ॥
ಚಮರಿನಿಂದಾಕರ್ಷಣೋಚ್ಚಾಟಣಾದಿಯುರು ।
ವಿಧಿಯುಮಜ್ಞಾನಮಂ ಗಾರುಡಗಳಾದಿಯುಹ ।
ಚಮರೋಕ್ತಿಯಿಂದ್ರ ಘನ ಮಹೇಂದ್ರಜಾಲಮಂ ತಿಳಿಸುತಾತ್ರಿಗುಣಾತ್ಮನು ॥

(೭) ಗರುಡಿಯಂ ನಿರ್ಮಿಸುತ್ತೊಲಿದು ಶಸ್ತ್ರಾಭ್ಯಾಸ-।
ದುರುಸುರಗಿ ಹರಿಗೆಗಳ ಕಡಿತ ಬಡಿತಗಳನುರು-।
ಕೊರೆತಿರಿತಗಳನ್ನೈದೆ ಸವ್ಯಾಪಸವ್ಯಗಳ ಕರಚಮತ್ಕೃತಿಯುಸಿರದೆ ॥
ನೆರೆಗಲಿಸಿ ಮುನಿ ಮತ್ತೆ ನವ್ಯಚಾಪಾಳಿಯಂ ।
ದೊರಕಿಸೈನೂರನುರೆ ದರ್ಭೆಗಳ ಹೆವೆಗೆಯ್ದು ।
ಮೆರೆವ ಸಮಿಧೆಯ ಸರಲನೆಸಗುತ್ತೆ ನೀಟಾಗಿ ಮೊಟೆನುತೆ ತೋರಿಸಿದನಃ ॥

(೮) ಪೇವಡೆವ ಜಾಣ್ಮೆಯಂ ಶಸ್ತ್ರ ಸಂಧಾನಮಂ ।
ತೋವಿ ಗುರಿವಿಡಿವುದಂ ತುಡಕುವಾತಂತ್ರಮಂ ।
ಕೋವಿದರನುರೆ ಜಯಿಸುವುದನರಿವುದಂ ಪೇಳಿದಂ ಧುರದೆ ಹೆದೆಮರಿಯಲು ॥
ನೇವರಿಸುತುರುಹೆದೆಯನಿದಿರಿಕ್ಕಿ ಬಲಿವುದಂ ।
ಹೇವರಿಸಿ ಹಿಮ್ಮೆಟ್ಟುವರಿಗಳಂ ಮುಂಗಟ್ಟಿ ।
ಡಾವರಿಸಿ ತಡೆವುದಂ ಬಿಡುವುದಂ ಕಾವುದಂ ಕಲಿಸಿದಂ ಗರುಡಿಯುಲ್ಲಿ ॥

(೯) ಮೇಘಮಂ ತೋರೆನಲ್ ತೋರುವಂ ಮಂತ್ರದಿಂ ।
ಸಾಗರವ ಬರಿಸೆನಲ್ ಬರಿಸುವಂ ಮಂತ್ರದಿಂ ।
ವೇಗದಿಂ ಪವನನಂ ಸುಳಿಸೆನಲ್ ಸುಳಿಸುವಂ ಮಂತ್ರದಾಬಲ್ಪಿನಿಂದೇ ॥
ನೀಗುತುರೆ ವಸ್ತುಮಂ ಮರಳಿ ಮುಂದಿಕ್ಕುವಂ ।
ಲಾಗಿಸಿಂ ಮೂಗಣ್ಣನಾಂತವಗೆ ಬಿಡದೆ ಸರಿ-।
ಯಾಗಿ ವಿದ್ಯದಿನತ್ರಿಜನ ಶಿಕ್ಷೆಯಿಂ ಬೆಳಗಿದಂ ಕಾರ್ತವೀರ್ಯನೈದೆ ॥

(೧೦) ಮರುಪವೈದಾರಾದುದಖಿಲ ವಿದ್ಯಂಗಳಂ ।
ದೊರೆಮಗಂಗುರೆ ತಿಳಿಯಲಿರ್ಪಾಗ ಶಿಕ್ಷೆಯುಂ ।
ಪರಿಹರಿಸುತಾತನಂ ಮಿತ್ರನಂತೆಣಿಸುತುಪಚರಿಸುತಿರೆ ದತ್ತಮುನಿಯು ॥

ಪರಿಮಲ ಸುವರ್ಣಕುಂಟಾದೊಲಾಬಹುಬಾಹು-।
ಮಿರುತಿರ್ದನೇನೆಂಬೆನಾಗಳತಿಕುಶಲದಿಂ ।
ಪಿಂತಂದನತ್ರಿಯುಜಲೋಕದಿಂದೆಂಬನುಡಿ ಪರ್ಬಿರ್ದುದಾವನದಲಿ ॥

(೧೧) ಕಾಣುತಿದಿರೇಳ್ದು ದತ್ತಾತ್ರೇಯನನ್ನೆಗಂ ।
ಧ್ಯಾನದಿಂದಭಿನಮಿಸಲೊಡನಾಗಳನಸೂಯೆ-।
ಯಾನರೇಂದ್ರಾತ್ಮಜನ ಮಣಿಸಿದಳ್ ಪ್ರಾಣೇಶನಂಘ್ರಿಗಳ್ಗೆಚ್ಚರಿಸುತೆ ॥
ನೂನಮಾನಂದಪುಳಕದೊಳ್ಮೈದೆ ಬೆರಗಾಗಿ ।
ಮೇಣಿವಂ ನಮ್ಮ ಮಖವೀರ್ಯಭೂಪೋತ್ತಮನ ।
ಸೂನುವೇಂ ಬಾಳೆಂದು ಪರಸಿ ಮಿಗೆ ತವಕದಿಂ ಪದುಳಿಸಿದನತ್ರಿಮುನಿಯು ॥

(೧೨) ಸುತ್ತಲುಂ ಸತ್ಯಲೋಕದೆ ಪೊಳಗಲೈತಂದೆ ।
ಮತ್ತೆ ಶಶಿಯೆನ್ನಣುಗನೆಲೆ ವತ್ಸ ಶಶಿವಂಶ-।
ಕುತ್ತಮಂ ನೀನೆಂದಬಳಿಕೆಮಗೆ ಮರಿಮಗಂ ಮಂಗಲಕೆ ಮನೆಯಾದುದು ॥
ಮತ್ತೆಲೆ ಕುಮಾರ ಕೇಳ್ ದತ್ತಂ ಸುಕಾರಣಿಕ-।
ನಿತ್ತನುಪದೇಶಮಂ ಬರಿದೆ ಬರಡಾಗದಿ-।
ನ್ನೆತ್ತಲುಂ ಸತ್ಯಮಂ ನಿತ್ಯ ನೀಂ ಬಿಡದೆ ನುಡಿಯೆಂದೆನುತ ತಳ್ಕಿಸುತ್ತೆ ॥

(೧೩) ಬಿಜಯಮೆಸಗಲಿಕೆಮಗನುಜ್ಞೆಯೇಂ ತಾಪಸ-।
ದ್ವಿಜರಿಗಿಹ ಲೋಲುಪ್ತಿ ಜರೆದಿರ್ದರನುಮಿಲ್ಲ-।
ಮುಚಲೋಕದಲ್ಲಿರ್ಪೆ ನೀಂ ಧ್ಯಾನಿಸಿದ ಚಣದೊಳೈತರ್ಪೆನಾಂ ನೈಜದೆ ॥
ತ್ರಿಜಗಪಾಲಕನಪ್ಪೆ ಮಗನೆ ಕೇಳ್ ಸಿದ್ಧಮಿದು ।
ವಿಜಯಮಂ ಪೊಂದೆನುತ ಮುಂಡಾಡಿ ಮುನಿವರಂ ।
ಯಜಮಾನತನದೊಳನಿಬರನೈದೆ ಸೈಪಿಟ್ಟು ಬೀಳ್ಕೊಂಡನತಿಮುದದಲಿ ॥

(೧೪) ಭೂಪಾಲ ಕೇಳತ್ರಿಮುನಿಪುಂಗವಂ ತಪೋ-।
ವ್ಯಾಪಾರಕೈದಲಾ-ಬಳಿಕೈದೆ ದತ್ತನಾ-।
ಭೂಪಾಲನಾತ್ಮಜಂಗತಿಗೋಪ್ಯ ವಿದ್ಯಗಳನರಿಪಿದಂ ಮರೆ ಮಾಜದೆ ॥
ಅಪೂರ್ವ ನೃಪರಿಗಿಂತಧಿಕ ಬಲನಾಗಳಾ-।
ಭೂಪಾಲಪುತ್ರನೊಡನೋರ್ದಿನ ಸುಘೃತಭಕ್ಷ್ಯ ।
ಸಾಪಙ್ಕ್ತಿ ಭೋಜನಮೆಸಗಿ ಬೋಧಿಸಿದನಮಲ ನೀತಿ ಧರ್ಮಗಳನೊಲಿದು ॥

(೧೫) ಬಲ್ಲಿದಂ ಕ್ರತುವೀರ್ಯ ಭೂಪನೀಧರೆಯುಳ್ಳ ।
ಬಲ್ಲಿದಂ ನೀನಾತನುದರಾಂಬುಧಿಯೊಳೈದೆ ।
ಬಲ್ಲಿದ ಸಹಸ್ರ ಭುಜಮಾಂತು ಕೊಂಡುದಿಪ್ಪುದತ್ಯಧಿಕಮಹುದದರಲಿ ॥

ಬಲ್ಲಿದರು ಮಂತ್ರೋಪದೇಶಂ ಧನುರ್ವಿದ್ಯೆ-।
ಮೆಲ್ಲಗಡ ವಶವಾದುದಿನ್ನಿದರ ಮೇಲೆಂತು ।
ಸಲ್ಲಲಿತ ಸೌಖ್ಯದಿಂ ಪೊರೆವೆಯೋ ಕೊರೆವೆಯೋ ಲೋಕವಂ ಪೇಳೆನ್ನುತ ॥

(೧೬) ಮಣಿಯಲ್ಲಧಿಕವಾದ ಹರಿನೀಲ ಮಣಿಯ ಸ-।
ದ್ಗುಣವನೀಕ್ಷಿಸಿದಲ್ಲಿ ತೃಣವನಾಂತೆಸೆವುದು ಮ-।
ಗನೆ ಕೇಳದರ ತೆರದೆ ನಡತೆಯಂ ಮಡಗು ನೀಂ ತೃಣವನಾದರು ಕಳೆಯದೆ ॥
ಪಣಗಳಂ ಗಳಿಸುತ್ತೆ ಪೋಷಿಸುವುದಿದಿರಾಗಿ ।
ಸೆಣಸಲ್ಕೆತಂದವರ್ ಯಮ ಶನಿಗಳಾದರುರೆ ।
ಪಣೆಯ ಬರಹವನಳಿಸುವುದೆ ಜಗದೆ ಸದ್ಧರ್ಮ ನೃಪನೀತಿ ಕೇಳೆನ್ನುತೆ ॥

(೧೭) ತಾ ಸುವಾಸನೆಯ ಪೊಲಬರಿತೆಂತಲರ್ಗಳ್ಕೆ ।
ಭಾಸುರಕುಸುಮತತಿಯೊಳಡಗಿರ್ಪ ಮಕರಂದ-।
ವಾಸನೆಯನುರೆ ಸವಿದು ನಲಿವಂತೆ ಧರೆಯಲ್ಲಿ ಸಿದ್ಧಾಯವಂ ಜನರನು ॥
ಕ್ಲೇಶವಂ ಪಡಿಸದೇ ನವನೀತದಲ್ಲಿರ್ಪ ।
ಕೇಶವಂ ತೆಗೆವಂತೆ ತೆಗೆಯಬೇಕಲ್ಲದಿರೆ ।
ಭಾಸುರದ ಕುವಲಯ ಶ್ರೀಗವಂ ತಿಲಕನೆಂತಾಗುವಂ ತಿಳಿದಿರಿದನು ॥

(೧೮) ಜ್ಞಾನಿಜಾಣರನ್ನೈದೆ ನಿಂದಿಸದೆ ಬಂಧಿಸದೆ ।
ಹೀನರಜ್ಞಾನಿಗಳನೀಕ್ಷಿಸದಪೇಕ್ಷಿಸದೆ ।
ಸೀನೆ ಗತಿಯೆಂಬರಂ ಭಂಗಿಸದೆ ಹಂಗಿಸದೆ ಬಡವರಂ ಬಿಡದೆಡಹದೆ ॥
ಮೌನಿಸಂತತಿಯನುರೆ ಪೀಡಿಸದೆ ಬಾಡಿಸದೆ ।
ಮಾನಿನಿಯರಲಿ ಗುಟ್ಟ ಸೂಚಿಸದೆ ಯೋಚಿಸದೆ ।
ಪ್ರಾಣಿಯಂ ಕೈಯಾರೆ ಭೇದಿಸದೆ ಬಾಧಿಸದೆ ಚಂದದಿಂ ಮುಂದಾಳ್ವುದು ॥

(೧೯) ಹಿರಿಯರಲಿ ಭಕ್ತಿಯಂ ಧುರದಲ್ಲಿ ಶಕ್ತಿಯಂ ।
ಕರದಲ್ಲಿ ಬಲ್ಮೆಯಂ ಶರಣರಲಿ ನಲ್ಮೆಯಂ ।
ದುರುಳರಲಿ ಮುಷ್ಟಿಯಂ ಗರುವರಲಿ ದೃಷ್ಟಿಯಂ ಸರ್ವರಲಿ ನಯವ ಭಯವ ॥
ಪರರಲ್ಲಿ ಮರ್ಮವಂ ವರರಲ್ಲಿ ಧರ್ಮವಂ ।
ನೆರವಲ್ಲಿ ಸರಸವಂ ತೊರೆವಲ್ಲಿ ವಿರಸವಂ ।
ಚರರಲ್ಲಿ ಲಾಲನೆಯ ಸುರರಲ್ಲಿ ಪಾಲನೆಯ ಬಿಡದೆ ನಡಿಸುವದು ಮಗನೆ ॥

(೨೦) ಗೋಧನಕನಕದಾನ ಭೂದಾನವನ್ನದಾ-।
ನಾದಿಯಾದಷ್ಟನುರುಯಜ್ಞಾದಿಷಟ್ಕರ್ಮ-।
ವೈದಿವೇದೋಕ್ತದಿಂ ವಿಪ್ರಗುರುದೇವತಾ ಭಜನೆಯನನಿಶವಲಸದೆ ॥

ಆದರಿಸುತನುದಿನಂ ನಡೆಯಿಸುವದತ್ಯಧಿಕ ।
ಸಾಧನಂ ಕೆರೆಸರೋವರವಾಪಿಕೂಪವಾ-।
ಮೋದಕರ ದೇವತಾಲಯಮವನಗಳಂ ಬಿಡದೆ ನಿರ್ಮಿಪುದೆ ಸದ್ಧರ್ಮವು ॥

(೨೧) ಸತ್ಯಸನ್ಮಾರ್ಗಸತ್ಕರುಣಧೀಯಾಚಾರ-।
ಮತ್ಯಧಿಕ ಸುಜ್ಞಾನ ಸಾಮರ್ಥ್ಯ ಶಿವಭಕ್ತಿ ।
ತಥ್ಯವಾಗಿರ್ಪವರ್ ಸುರನರೋರಗರೊಳಾರಾದೊಡೇನೀಭುವಿಯಲಿ ॥
ಸ್ತುತ್ಯರೆಲೆ ಸುಕುಮಾರ ಲೋಕಾಂಧಕಾರಮಾ-।
ದಿತ್ಯನಿಂ ಮಿಗೆ ಪರಿದು ನಿತ್ಯ ಪಜ್ಜಳಿಪಂತೆ ।
ಸತ್ಯದಿಂದಾಳ್ವುದುರೆ ಪೆತ್ತವರನಳಲಿಸದೆ ಪಾಪಮಂ ಮಿಗೆ ವರ್ಜಿಸಿ ॥

(೨೨) ಕುವರಕೇಳೆನ್ನೊಂದನುಸುರುವೆಂ ಲೋಕದೊಳ್ ।
ಯುವತಿಯರ್ ಮೋಹದಾರನ್ನೆಯರ್ ಬಹಳುಂಟು ।
ಭವ ಕಮಲಭವ ಸುರಪರಂ ಮೋಹಿಪಾಮೋಹಿನಿಯರ ಮೋಹನವನೈದೆ ॥
ಬವಣೆಯಲಿ ಸೈರಿಸಲ್ ವೇಳ್ಕುಮಂತೆಲೆ ಕಂದ ।
ಯುವತಿಯರ ಕೈರವದಳಾಕ್ಷಿಯರ ಕಡುನೋಟ-।
ದವಗಡಿಪ ವಿಶಿಖಂಗಳಿರಿತ ನಗೆನುಡಿಗಡಿತಗಳನೆಣಿಸದೇ ಸತತವು ॥

(೨೩) ಪೇರುರಂ ಕಂಪಿಸದೆ ದುರ್ಮನದ ಮುಸುಡು ತಲೆ-।
ದೋರಲುರೆ ಮುರಿದಿಕ್ಕಿ ಸತ್ಕರಣನಂದಿಯಂ ।
ಏರಿ ನೀಂ ಮದನಂಗೆ ಹರನಾಗಿ ಪೊರಗಟ್ಟುವಗ್ಗಳಿಕೆಯಂ ಪೊಂದಿರೆ ॥
ಸೀರೆಯರ ಸತತದುರ್ಮಾರ್ಗಸಂಚಾರೆಯರ ।
ಕ್ರೂರೆಯರ ಶೂರೆಯರ ಬಹುಭಯಂಕರದೊಳವಿ-।
ಚಾರೆಯರ ದೂರ ಬಿಟ್ಟಗಲಿಪ್ಪೆ ಕಂದಕೇಳವರದುರ್ಗುಣಗಳನುರೆ ॥

(೨೪) ವನದಂತೆ ಚಿಗುರಿಸುತೆ ತಳಿರ್ಗೆಂಪನಧರದಲಿ ।
ಘನದಂತೆ ಮಿಂಚನುರೆ ಮಿಂಚಿಸುತೆ ಕಂಗಳಲಿ ।
ಮುಸಿಯಂತೆ ನಿರ್ಲಜ್ಜೆಯಾಂತು ರತ್ನಾಕರನೊಲುರೆ ಸತತ ರತ್ನಾಳಿಯ ॥
ತನುವಿನೊಳಲಂಕರಿಸಿ ರತಿಯಂತೆ ಮನ್ಮಥನ ।
ನೆನಪಿನಿಂದಿರ್ಪ ನಾರಿಯರನಾರ್ ಗೆಲ್ವರೆಂ-।
ಬನುಮಾನಮೆನಗಿರ್ಪುದಿವರನುರೆ ಜಯಿಸಿದರೆ ಸಿದ್ಧಿಪುದು ಸರ್ವಸಿದ್ಧಿ ॥

(೨೫) ಗುರುಹಿರಿಯರೊಪ್ಪಿಗೆಯೊಳಗ್ನಿಸಾಕ್ಷಿಯೊಳೈದೆ ।
ಪರಿಣಯಂ ಬಳಿಕಾಗಿ ರಮಿಸುತಿಹುದತ್ಯಧಿಕ ।
ಮರಿಯಾದೆ ಸದ್ಧರ್ಮ ದೋಷವಿಲ್ಲಾವೃತ್ತಿಗಂಕುರಿಸಿ ಸಂತಾನವು ॥

ದೊರಕೊಳ್ಳಲೀರ್ಕುಲಕ್ಕಾಶ್ರಯನೆನಿಸುತ್ತೈದೆ ।
ಮೆರೆದಪಂ ಸಿದ್ಧಾಂತಮಿದನುಳಿದು ಪಾದರಿಯ:-।
ನರಪರಸಿ ಸರಸದಿಂ ಜೆರೆವವರ್ ಬೀಳ್ವರಾಭಾರಣೆಯ ರೌರವಕ್ಕೆ ॥

(೨೬) ಮುಡಿಮೊಲೆಗಳಿಲ್ಲದಾನಾಂಗಿ-ಧರಣಿಯಲಿ ।
ಕಡುಕಠಿಣಮಹಬಿದಿರ್ ಮೈಗೆಟ್ಟು ತಲೆವಾಗಿ ।
ಹಿಡಿತಕೊಳಗಾದಪುದು ಮುಡಿಮೊಲೆಗಳಿರ್ಪ ನಾರಿಯರನುರೆ ಕುಂದದೆಂತು ॥
ಒಡಗೂಡಿ ಮಣಿಸಿದಪೆಯಕಟ ಗೌತಮನಂತೆ ।
ಬಿಡದಗಲಿರುತ್ತವರ ಮೆಟ್ಟುತ್ತುಪಾಯದಲಿ ।
ಮಡದಿಯರ ಮೋಹಮಂ ಗೆಲ್ವ ಸಾಮರ್ಥ್ಯಮಂ ಬಿಡದೆ ನೀಂ ಪಡೆವುದೆಂತೊ? ॥

(೨೭) ಎಂದರಾಕ್ರತುವೀರ್ಯನಂದನಂ ಹರ್ಷದಿಂ ।
ಕುಂದದನಿಶಂ ಮಂದಮರುತನಿಂ ನಂದನದ ।
ಸಂಧಿಯಲಿ ರಸಮಾಳೆ ಸುಳಿಯೆಲೆಗಳುರೆ ಪೊಂದುವಂತೆಂದು ನಿಡುದೋಳ್ಗಳಾ ॥
ಗೊಂದಣಂಗಳನಾಗ ಕೂಡಿಸಭಿನಮಿಸಿ ಮುನಿ-।
ಗೆಂದನೆಲೆ ಗುರುವೆ ಕೇಳ್ ವಜ್ರಮಂ ಪರುಷಮಹ ।
ಕುಂದಣದೆ ಬಂಧಿಸಿದ ಬಳಿಕ ಕಾಬೊರ್ನ್ನಪ್ಪುದೇನಾಕುಲಿಶ ಜಗದಲಿ ॥

(೨೮) ತಾಮರಸ ಸದೃಶೋಪಮಾನದ ಭವತ್ಪಾದ-।
ಧೀಮಹಾ ಸೀಮೆಯ ಮಿಳಿಂದನಾಗಿಹೆನೆನ್ನ-।
ತಾಮಹೇಶ್ವರಪುತ್ರನುಸುರಲಾ-ಮುನಿಪ ನಸು ನಗುತಾಗಳೆಲೆ ಕುವರನೇ ॥
ವ್ಯೋಮಕೇಶನ ಸತತಮೆಚ್ಚರಿಂ ಭಜಿಪುದೊಂ-।
ದೇಮನದೊಳೈದೆ ಕುಲದೈವ ಶಿವ ನಿನಗೆಂದು ।
ಪ್ರೇಮದಿಂ ಪಾಲಿಸಿದನಭವನಪಚಿತಿಯ ಪೂರ್ವೋಕ್ತಪದ್ಧತಿಗಳಿಂದೆ ॥

(೨೯) ತರಲನುರೆ ಬ್ರಹ್ಮತ್ವತೇಜದಿಂ ರವಿಯಂತೆ ।
ಮಿರುಮಿರುಗುತಾಶ್ರಮದೆ ಬೆಳಗುತಾ-ಯೋಗೀಂದ್ರ-।
ನೆರಕದಿಂ ಕಂಗೊಳಿಸೆ ತಾಪಸರ್ ತಮತಮಗೆ ನಲಿದು ಮಿಗೆ ಸನ್ಮಾರ್ಗವೆ ॥
ಪರಿವೇಷ್ಟಿಸಾತನಂ ಬಹುಬಲಂ ಬಳಿಕಪ್ಪೆ ।
ನಿರುತಮೊಂದಾಮೋದಗೋಷ್ಠಿಯಿಂ ಸ್ತುತಿಸೆ ಭೂ-।
ವರಸುತಂ ಶಿರವಾಗಿ ಪೊಗಳದಿರಿ ಸಾಕೆನ್ನನುರೆ ಗುರುಗಳಂ ಪೊಗಳಿರಿ ॥

(೩೦) ಎನಲದಂ ಕೇಳ್ದೊಡನೆ ಸಾಧ್ವೀಶಿರೋರತ್ನ-।
ಮನಸೂಯೆ ಮಲ್ಲಿಗೆಯ ಮೊಗ್ಗೊಡೆದ ಮಾಳ್ಕೆಯಿಂ ।
ಮಿನುಗಿಸುತ್ತೆಳನಗೆಯನಿಂತೆಂದಳೆಲೆ ಕಂದ ಭೀಮನಂ ಸೋಮಧರನಾ ॥

ಮನಮುಟ್ಟೆ ಬೇಳ್ವುದೀದತ್ತನುಪದೇಶಮಾತೆ।
ನಿನಗಾದುದತಿಶಯಂ ಗುರುವಿಗಿಂತತ್ಯಧಿಕ।
ಘನವಿಲ್ಲಮುಸುರುವೆಂ ಬಾರೆಂದು ಕೈಪಿಡಿದು ಮನೆಯೊಳಗೆ ಕರೆದುಯ್ವುತೆ॥

*(೩೧) ಅಂಪಿದಳ್ ಕಳಿತು ಗುರುವೇ ಬ್ರಹ್ಮನಾರೆ ಗುರುವೆ।
ಹರಿಯು ಗುರು ಸಾಕ್ಷಾತ್ಪರಮಶಂಕರಂ ಜಗದೆ।
ಗುರುವೆ ತ್ರಿಮೂರ್ತಿಗಿಂತಧಿಕ ದೈವಂ ಕ್ರಮದೊಳಜಹರಿಹರಸ್ಥಾನದೆ॥
ಅರಿತರಿಯದೇಗೆಯ್ದ ಪಾಪಮಾರೆ ಪರಿಹರಂ।
ಹರಿಹರಗುರುಗಳಿಂ ಕ್ರಮದೆ ಗುರುವಿನಲ್ಲೆಸಗಿ-।
ದುರುಪಾಪಮಾರೆ ವಜ್ರಬಂಧಮಕ್ಕಾದಿಯಲಿ ಗುರುವಿಗೆರಗುವದೆನ್ನುತೆ॥

(೩೨) ಪೇಳಿದಳ್ ಮತ್ತೆ ಗುರುವಾದ ದತ್ತಾತ್ರೇಯ-।
ನೇಳಿಗೆಯ ಮೇಲ್ಗಥೆಯ ತ್ರಿಮೂರ್ತಿ ರೂಪಮಂ।
ತಾಳಿದಾಮಗನಿವಂ ಮನುಜನಲ್ಲದ್ವಯಂ ಪತಿಕರಿಸಿದಂ ನಿನ್ನನು॥
ಬಾಲ ನಿನ್ನುತ್ಪತ್ತಿ ಕಾರಣದ ಲೀಲೆಯಾ-।
ಮೂಲಮಂ ತಿಳಿದಿರ್ಪನೆನುತೆ ಮನ್ನಿಸುತಿರಲಿ-।
ಕಾಲಯದೊಳತ್ತ ಭಾರ್ಗವನರಿಪುವಪಸುತನ ಮೋಹದಿಂ ನೆನೆದಳಬ್ಬೆ॥

*(೩೩) ಧಾರುಣಿಯೊಳುಲುಚುಕವಿಶ್ವಸ್ಮಾರ್ತ ವಿಪ್ರ ಹಿರಿ-।
ಯೂರಕರಣಿಕ ರಂಗನರ್ಭಕನ ಪುತ್ರ ಬೊ-।
ಬ್ಬರನೂರೆದೀಪರಶುರಾಮ ರಾಮಾಯಣದ ಪಂಚಮೋಧ್ಯಾಯದಲ್ಲಿ॥
ಸೇರಿದೀಶಿಖಿಯನಲ ಪದ್ಯಗಳನಂಬುಧಿಯ।
ತೀರದ ಕಡೇಕೋಡಿ ಕೇಶುವೆಂಕಪ್ಪ ಹೆಗ-।
ಡೇರಣಾಗನಣಾಗ ವೆಂಕಪ್ಪನುರೆ ತಿದ್ದಿದಂ ಶ್ರೀನಿವಾಸನ ದಯದಲಿ॥

**ಅಂತೂ ಅಧ್ಯಾಯ ೫ ಕ್ಕೆ ಪದ್ಯ ೨೩೨ ಕ್ಕೆ ಮಂಗಳಮಸ್ತು.**

---

## ೬ ನೆಯ ಅಧ್ಯಾಯ.

**ಸೂಚನೆ:**—ವರದಿಮಾಶ್ವಿನಿಯ್ಯೆದೆ ತನಯನಂ ನೆನೆದು ಮಿಗೆ।
ಮರುಗಲುರೆ ಸಂತವಿಸಿ ಮುಖವೀರ್ಯ ನೃಪವರ್ಯ।
ಕರಸಿದಂ ಮಂತ್ರಿಯುತ ಕೋವಿದವರೇಣ್ಯನಂ ಕಳುಪುತಾ ಗುರುವಿನೆಡೆಗೆ।

(೧) ದಶರಥಾತ್ಮಜ ಲಾಲಿಸಖಿಲ ವಿದ್ಯಂಗಳಂ।
ಕುಶಲತ್ವದಿಂ ಕಲಿತು ಮಿಗೆ ನೀತಿಧರ್ಮಗಳ-।
ನೊಸೆದಾಲಿಸುತ್ತೀಶ್ವರಧ್ಯಾನದಿಂ ಕಾರ್ತವೀರ್ಯನಾಶ್ರಮದೊಳೈದೆ॥

ಜೇನುಗೆವಡೆದತ್ರೇಯನುರುಕೃಪಾಸಾಗರದ ।
ಶಶಿಯಂತೆ ಶೋಭಿಸುತ್ತಿರಲಿತ್ತ ಬಳಿಕತ್ತ ।
ಶಿಶುವೆಂತಿಹುದೊ? ಬನವೊಳೆಂದಬ್ಬೆಯುಬ್ಬಸದೆ ಮರುಗಿದಳ್ ನಗರದಲ್ಲಿ ॥

(೨) ಸಕಲಪಶು ಪಕ್ಷಿಕೀಟಕವಿತತಿಗಳ್ ಸದಾ ।
ಚಕಪಕನೆ ಕುದಿಗೊಂಬವೆಳೆಪೋತಗಳನಗಲ-।
ಲಕಟಕಟ ಭುವಿಯೊಳೆಷ್ಟತಿ ಕಠಿಣ ದುಷ್ಕರುಣಿ ವಿಕಳಮತಿ ನಿರ್ಮೋಹಿನೀ ॥
ಸುಕುಮಾರಕನನಗಲಿ ಪಂಚಾಬ್ದಮಿರೆ ಜೀವಿ-।
ಸಿಕಟ್ಟಿದಿಲ ಸುಖದೊಳಿಹೆನ್ನೈ ಸ್ವಸ್ಥ ಚಿತ್ತದಲಿ ।
ಸಕಲತಿಯರ್ಗ್ಗಂತುಗಿಂತ ಕೀಳಾದೆನೆನ್ನುತ ಮರುಗಿ ಬಿಸುಸುಯ್ದಳು ॥

(೩) ರಾಯಗೆಳ್ಳನಿತುನೆನಪಿಲ್ಲಕಟ ರಾಜ್ಯಕಂ-।
ದಾಯಗಳನೆತ್ತುವಳಿಯಾಕಜ್ಜಪೊಕ್ಕಿಸಲ್ ।
ತಾಯಿಯಾಂ ಸಂತಾನನಿಕ್ಷೇಪವಂ ಪೊತ್ತು ಪೆತ್ತವಳ್ ಪಾಪಿಷ್ಠೆಯು ॥
ಆಯಿತಾರಣ್ಯಕೆಳೆಮಗುವಂ ಕಳುಪಿ ಪುರದೆ ।
ನಾಯಿಯಂತೊಡಲನುರೆ ಪೋಷಿಸುತೆ ಕೆಡಹಿರ್ಪೆ-।
ನಾಯಸವನೆಂತಿಹುದೊ ವನದೊಳೆಂದಾಪಸುಳೆಗಾಯುವತಿ ಬಾಯಾರ್ದಳು ॥

(೪) ತಿಲಕವಂ ಫಣೆಗೆ ಕಪ್ಪಂ ಕಣ್ಗೆ ಮಿಗೆ ಹಚ್ಚ-।
ದೊಲಪಿನಿಂ ಕನ್ನಡಿಯನೀಕ್ಷಿಸದೆ ಮೃಷ್ಟಾನ್ನ-।
ವೊಲಿದುಣ್ಣದರಗಿಣಿಯನಾಡಿಸದೆ ಪರ್ಯಂಕದಮಲಮೃದುತಲ್ಪದಲ್ಲಿ ॥
ಕುಳಿತು ಸುತನಂ ಧ್ಯಾನಿಸುತೆ ಯೋಗಿಯಂತೆಸೆಯೆ ।
ಕೆಳದಿಯರ್ ಬಂದುಪಚರಿಸಿ ನುಡಿಸೆ ನುಡಿಯದಿರೆ ।
ಗಲಭೆಯಾಗಲ್ ತಿಳಿದು ನೃಪನೈದಿ ನುಡಿಸಿದಂ ತೊಡರದೇಂ ಮಡದಿಯೆನುತ ॥

(೫) ತಕ್ಕವಚನದೊಳೊಡಂಬಡಿಸಲವನಿಪನಾಗ ।
ಫಕ್ಕನೆ ವಸಂತದುರುಘರ್ಮದಲಿ ದಾಕ್ಷಿಣ್ಯ-।
ಮೊಕ್ಕಸಲೆಳೆಗಾಳಿಯುರೆ ಬಿಡದೆ ಸುಳಿವಂತೆ ನಸುನಗೆಯನುರೆ ಮಿನುಗಿಸಿ ॥
ಒಕ್ಕಣಿಸಿದಳ್ ತನ್ನ ಕುವರನಂ ಕರಿಸಿ ಮುಂ-।
ದಕ್ಕರೀಕ್ಷಣ ಸುಖಂ ಬರಲು ತೋಳ್ತೆಕ್ಕೆಯಿಂ-।
ದಕ್ಕರಿಂ ಬಿಗಿದಪ್ಪುತುರಕೆ ಕುಳ್ಳಿರಿಸಿ ಸುಖಿಪೆಂ ಮೋಹದಿಂ ಮುದ್ದಿಸಿ ॥

(೬ ವರಕಲಭನಂತೈದೆ ಪರಿತಂದು ಸೆರಗಾಂತು ।
ಹರಿಶಿಶುವಿನಂತೊಡನೆ ಗರ್ಜಿಸುತೆ ಕಾಡುತೆಳೆ-।
ಯೆಳೆಸಂತರಳಿಸುತೆ ಸಗ್ಗಗ್ಗತಾವರೆಯ ಪಿಕನಂತೆ ಸರಗೆಯ್ವುತೆ ॥

ಭರದೆ ಸತ್ಕೀರ್ತಿ ಸೌಭಾಗ್ಯಾಬ್ಧಿಯಂ ಸಿರಂ-।
ತರ ವರ್ಧಿಪಾಪೂರ್ಣಶಶಿಯೊಲಿಹ ಪುತ್ರನಂ।
ಕರಿಸಿಕೊಡಿರೆನಗವನ ಸುಂದರಾಸ್ಯಾರವಿಂದದಕನಸೆ ನೆನಪಾಗಿದೆ॥

(೭) ವರುಷವೈದಾರಾಗುವೀಗ ಸುತನೆಂತಿಹನೊ?।
ದುಃಖಿತತ್ವದಿಂದೆಲ್ಲಿ ನಿರ್ಜರರೊಳಾಡುವನೊ?।
ಕಂಕರೆಯುಗೊಂಡಕಟ ಕಂಗೆಟ್ಟು ಕರಗಿಹನೊ? ಶೀಘ್ರದಿಂ ಕರಿಸಿರೆನುತಾ॥
ವರದಿವಾಶ್ವಿನಿಯುನೇತ್ರೋತ್ಪಲಗಳಲಿ ಜಲವೊ-।
ಸರಿ ಕಂಠರವವೊಳಗೆ ಭೂವಿಬಿಂ ನಸುನಕ್ಕು।
ಬರಿಸುವೆಂ ಸೈರಿಸೆಂದೊಲಪಿನಿಂ ಪೊರವಟ್ಟು ಮಂತ್ರಿಯುಂ ಬೇಗೆ ಕರೆದು॥

(೮) ಪುತ್ರನಂ ಕರಿಸಿಕೊಡಿರೀಗಳೆನ್ನುತೆ ಮಹಿಷಿ।
ನೇತ್ರದೊಳ್ ವಾರಿಯಂ ಸೂಸುತಿರ್ದಪಳಕಟ।
ರಾತ್ರಿಯೊಳ್ ವೈದೇಹಿ ದುಃಖಿಸುಂ ಸ್ವಪ್ನದೊಳ್ ತನಗವಂ ನೀನ್ನೈಸುತೆ॥
ಅತ್ರಿಜಂಗಿದನುಸುರಿ ಬಾಲನಂ ನೀನತಿವಿ-।
ಚಿತ್ರದಿಂದೊಡಗೊಂಡು ಬಾರೆಂದು ನವಪೀತ-।
ದುತ್ರಿಗೆಗಳಂ ಸ್ಫಟಿಕಮಣಿಮಾಲೆಗೌಳಂಗಳಂ ಕೊಟ್ಟು ಬೀಳ್ಕೊಟ್ಟನು॥

(೯) ಶತ್ರುಹರ ಕೇಳ್ ಮಂತ್ರಿ ಸರ್ವಸನ್ನಾಹದಿಂ।
ಛತ್ರ ಚಾಮರ ಸಿಂಧ ಚತುರಂಗದೊಗ್ಗಿನಿಂ।
ಶತ್ರುಗಳ್ ತಲ್ಲಣಂಗೊಳುವಂತೆ ನಡೆಗೊಳಲ್ ಕಂಡು ಭಯಂಗೊಂಡು ಬೆಕ್ಕ॥
ಅತ್ರಿಯಸಾತ್ಮಜನ ಪುಣ್ಯಾಶ್ರಮಂ ಕಂಪಿಸಲ್।
ಚಿತ್ರಮೇನೆಂದೇಳ್ದು ಸುಕುಮಾರನಾಲಿಸಿ ವಿ-।
ಚಿತ್ರತರ ಗಲಭೆಯಂ ಮಾಣಿಸುತ್ತುಘವಿಸಿ ನಿಂದನೆಳೆ ಸಿಂಗನಂತೆ॥

(೧೦) ಒತ್ತಿಮಣಿಸೈಜೂರ್ಧನುವನೊಡನೆ ಜೇವಡೆದು।
ಮತ್ತೆ ಕರವ್ಮೊನೂರೊಳಂಬುಗಳನುರೆ ಸೆಳೆದು।
ಚಿತ್ರಜಾಂತಕನಂತೆ ನೃಪಸುತಂ ಕಾಲೂರಿ ಮಂದಾಕಿನಿಯುಕೂಲದೆ॥
ಒತ್ತರದೆ ಬೊಬ್ಬಿಡಲ್ ಕಂಗೆಟ್ಟು ಚೌಬಲಂ।
ತತ್ತರಿಸಿ ಮಂತ್ರಿಯಂ ಮರೆವೊಕ್ಕರಾತನಂ।
ಪಿತ್ತವಕ್ ರಕ್ಕಸಿಯುಳಾದರಾರಿದಿರೆನ್ನುತುಪಮೆಯುಂ ನಗುತೆಂದನು

(೧೧) ರಕ್ಷಿಪುದೆನುತ್ತೈದೆ ಬೇಡಿಕೊಳಲಾತನಾ-।
ಕುಕ್ಷಿಯೊಳ್ ವಿಗೆ ಮಮತೆಯುಂಕುರಿಸದಿರ್ದಪುದೆ?
ದಕ್ಷತನವಂ ತೋರ್ಪ ರಾವಲ್ಲ ವಿಭುವೆಮಗೆ ಪರರಾದೊಡಿರಿಯಬಹುದು॥

ಭಿಕ್ಷುಗರ ಕೊಳಲಾಟಕೆಸಗಿದೀ ಕಜ್ಜವಂ ।
ಈಕ್ಷಿಸಂದಪುದೆಂದು ಸುಪ್ರಧಾನಂ ಪೇಳ್ದ-।
ರಾಕ್ಷಣಂ ಬಲನೆರಗಿ ತಲೆಗಾಯುವೇಳ್ಕೆಂದು ನುತಿಸುತ್ತೆ ನಡೆಗೊಂಡುದು ॥

(೧೨) ತಿಳಿದುಕೊಂಡನ್ನೆಗಂ ಬಾಲಕಂ ಮಾತ್ಪಿತನ ।
ಬಲವೆಂದು ಸಿಲ್ಲಲೆಡಬಲಗಳಂ ಬಿಡದಾಗ ।
ಸಲೆ ಸಟಾವರ್ಣಿಗಳ್ ವಟುನಿವಹ ಬಾಲೆಯರ್ ಬಳಸಿದರ್ ಪರಿವೇಷ್ಟಿಸಿ ॥
ಇಳಿದು ಮಣಿರಥಮನುರೆ ಮಣಿದು ಮಂತ್ರೀಶ್ವರಂ ।
ಪಲುಗೆಯಿಂದಾತನಂ ಸಾರಲಾ ಸುಕುಮಾರ-।
ನೊಲಿಸಿನಿಂ ತಾತಮಾತೆಯರ ಸುಕ್ಷೇಮಮಂ ಕೇಳಿದಂ ಮುನ್ನುಡಿಯಲಿ ॥

(೧೩) ಕುಶಲಮೆಲ್ಲರ್ಗಯ್ಯ ನೃಪವರಂ ನಿಮ್ಮ ನೀ-।
ಮಿಸಿನರ್ಗೆಚ್ಚರಿಸಿ ಕರೆದೈದಲ್ಪೈದೆಂದು ।
ಬೆಸಸಲಾನೈತಂದೆನೆಲೆತಂದೆ ಕೇಳೆಂದರಾನುಡಿಯನಿರದಾಲಿಸಿ ॥
ಹಸನಾದುದಯ್ಯ ತೋರ್ದಪೆನಿತ್ತ ಬಾರೆನುತ ।
ನಸುನಗುತ ಬಲಮನುರೆ ವಿಂಗಡಿಸಿ ಪಿಂದಿರಿಸಿ ।
ಶಶಿ ಸಹೋದರನೆಡೆಗೆ ಕರೆದುಯ್ದು ಮಂತ್ರಿಯುಂ ಪ್ರಣತನಂ ಮಾಡಿಸಿದನು ॥



(೧೪) ದೀರ್ಘಾಯುವಂತನಾಗೇಳೆಂದು ಪರಸುತಂ-।
ದೋರ್ಗೈಯ್ಯೊಳಾತನಂ ಪಿಡಿದೆತ್ತಿ ನುಡಿದನಾ-।
ನಾಗಾರ್ಲವಿದ್ಯಮಂ ಕಲಿಸಿದೀ ತನಯನಂ ಕರೆವುಯ್ಯಲೈತಂದೆಯಾ ॥
ನೂಗಾರ್ಲ ಮೇಲ್ಗೈಗಳಾಗಿನೀವಿಹುದೆಮಗೆ ।
ದುರ್ಗಾಧಿಪತ್ಯದಿಂ ಪುಸಿಯಲ್ಲ ಕೇಳೆಂದು ।
ಮಾರ್ಗಶ್ರಮಂಗಳಂ ಪರಿಹರಿಸಿ ನಲಿಸಿದಂ ಕಾಣಿಕೆಗಳಂ ಕೊಳ್ಳುತೆ ॥

(೧೫) ತಡೆದನಂದಾದಿನಂ ಗಮನಮಂ ಮರುದಿನಂ ।
ಪಡಗರದೆ ಸಿದ್ಧರಿಸಿ ಸರ್ವಸೈನ್ಯಾಳಿಗುಣ-।
ಬಡಿಸಿಷ್ಟಮೃಷ್ಟಾನ್ನ ಭೋಜನಂ ಗೆಯ್ಸಿ ಸಂಕೀರ್ಣದಿಂ ಸಚಿವನೊಡನೆ ॥
ಬಿಡದುಲಂಕರಿಸುತಾ-ಸಾಧ್ವಿಮಣಿ ನೃಪಜನಂ ।
ಪಡೆವಬ್ಬೆಗಾನಂದಮಪ್ಪುದೆಮಗಿನ್ನಿಲ್ಲಿ ।
ಜಡಿವುಬತಿ ಜೇಸರಮುದಂತಕಟ ಮರೆದಪೆಂ ಭುವಿಯೆಳೆನಲಿಂತೆಂದನು ॥

(೧೬) ಮಾತೆ ಕೇಳ್ ಭವದೀಯ ಪದ್ಧತಿಯನುಗೆ ನಂಬಿ-।
ದಾತನಾಂ ಕಳುಹಿದೊಡೆ ಪೋದಪೆಂ ಬೆಸಸುವರ-।
ಲೀತನಂ ಕಳುಪುವೆಂ ನನ್ನಿಯಿಂದೆನ್ನುತೆರಗಲು ದಯದೊಳನಸೂಯೆಯುಂ ॥

ಪ್ರೀತಿಯಿರಲೆನ್ನಯ್ಯ ಗಮಿಸೆನುತನುಜ್ಞೆಯಂ ।
ದ್ಯೋತಕಂ ಗೊಳಿಸೈದೆ ಬೀಳ್ಕೊಡಲ್ ಪೊರಮಟ್ಟು ।
ಭೂತಳದ ಸಪ್ತಾಶ್ವ ಶರಣೆಂದು ಮಖಮೀರ್ಯರ್ಸಂಭವಂ ಮಣಿಯೆ ಮುನಿಗೆ ॥

(೧೭) ಅಪ್ಪಿ ಮಗೆ ಮಮತೆಯಿಂದಾವರ್ತಿ ಕಾರುಣ್ಯ-।
ಕುಪ್ಪಸವನುರೆ ತುಡಿಸುತೊಡನೆಂದನೆಲೆ ಮಗನೆ ।
ಬಪ್ಪನಂ ಕೂಡಿರೈ ಬಪ್ಪೆನಾಂ ಪರಿಣಯಕೆ ಶುಭದ ಮೇಲ್ ಶುಭಮಪ್ಪುದು ॥
ತಪ್ಪುಮಾರ್ಗಕ್ಕಿಡದಿರಡಿಗಳಂ ಮತಿಯುಗಲ-।
ದಿಪ್ಪುದೆಮಗನಿಶಮುರುಕೀರ್ತಿಯಂ ತಪ್ಪದೇ ।
ತಪ್ಪುದೈ ವಿಜಯನಾಗೆಳೆಂದು ನೈದಡವಿ ಮರುಕದಿಂ ಬೀಳ್ಕೊಟ್ಟನು ॥

(೧೮) ಅಲ್ಲಿಗಲ್ಲಿಗೆ ಸುಳಿವ ವಿಪ್ರವಟುವರ್ಗಕ್ಕೆ ।
ಸೊಲ್ಲಿಸುತೆ ಗಮನವಂ ಮುನಿಕದಂಬಕ್ಕೆರಗು-।
ತೆಲ್ಲರಿಂದಭಿವೃದ್ಧಿಯಾಶರಕೆಯಂ ಕೊಳುತೆ ಸೇನಾನಿಯಂ ನೂಂಕುತೆ ॥
ಬಲ್ಲಿದರಸುಕುಮಾರ ನೈತರಲ್ ವಾಹಿನಿಗೆ ।
ಸಲ್ಲಲಿತ ವಾದ್ಯಂಗಳುರೆ ಮೊಳಗೆ ಪುಷ್ಪಕಮ-।
ನುಲ್ಲಸದೊಳೇರುತೊಡನೈದಿದಂ ತ್ರಿಗುಣಾತ್ಮನಂ ತಿರುತಿರುಗಿ ನೋಡುತೆ ॥

(೧೯) ಸಿಡಿಯೆ ತರುನಿಚಯಗಳ್ ಪುಡಿಯಾಗೆ ಭೂಧರಂ ।
ನಡೆದುದೊಡನಲ್ಲಿಂದೆ ಮಾರ್ಬಲಂ ಮತ್ತೊಂದು ।
ಕಡೆಯೊಳಾಗರುಡನುರುಧಾಳಿಯಿಂ ವ್ಯಾಲಾಢ್ಯನೈದೆ ಕಂಗೆಟ್ಟು ಬಳಲಿ ॥
ಬಿಡದಂಡಿಸಲ್ ಬಂದು ಪಿಡಿದೆತ್ತಿ ಮತ್ಕೇತು-।
ವಡರಿಕೊಂಡಿಂ ಗರುಡನಾಲ್ದನೈತರಲರಿವೆ ।
ಸಿಡಿಯಬೇಡೆಂದದಂ ಸತಿಕರಿಸಿ ನಡಿಸಿದಂ ರಥಮನಾ ಬಹುಬಾಹುವು ॥

(೨೦) ನೂಕಿಬಪ್ಪಶ್ವಗಳ ಬೆಂಬಲದೊಳಡಿಯನು-।
ದ್ರೇಕದಿಂದಿಡುತೈದುವಾನೆಗಳ ರಥವೆರಸಿ ।
ಡಾಕಿನಿಂ ಥಳಕಿಡುವ ಸಿಂಧ ಸೀಗುರಿ ಛತ್ರ ಚಾಮರ ಚಮೂಪಂಗಳ ॥
ವೈಖರಿಯೊಳಾಸುತಂ ಮೊಳಗುತಿಹ ವಾದ್ಯಗಳ್ ।
ಭೀಕರದೆ ರಂಜಿಪಾನಗರಮಂ ರಾಕಾಸು-।
ಧಾಕರನೊಲಾದಿತ್ಯನಸ್ತಮಿಹ ಸಮಯದಲ್ಲೊಳಪೊಕ್ಕನುತ್ಸವದಲಿ ॥

(೨೧) ಕೈಕೆಯಣುಗನೆ ಕೇಳ್ ಪುರಮನಾಗ ಮಖಮೀರ್ಯರ್-।
ನಾಕುಮಾರಂ ಪೊಗಲು ರಾಜಕುಲದವರೇಳ್ಗೆ ।
ಲೋಕದೊಳ್ ಪ್ರಜ್ವಲಿಪುದಿನ್ನೆಂದು ದಿನನಾಥನುರೆ ಮನದೊಳಾಲೋಚಿಸಿ ॥

ವ್ಯಾಕುಲಂಗೊಳುತೊಡನೆ ಮಿತ್ರರಂ ಬಿಟ್ಟಗಲಿ ।
ಸಾಕು ಸಂಸಾರ ಸಂಚಾರಮೆನಗಿನ್ನೆನ್ನು- ।
ತೇಕಚಿತ್ತದೆ ಹರಿಗೊರೆಯಲಬ್ಧಿಪೊಕ್ಕನೆನೆ ಮುಳುಗಿದಂ ಪಡುಗಡಲಲಿ ।

(೨೨) ಮಿತ್ರನಸ್ತಮಿಸೆ ನಲಿದಪನೀಗುರುದ್ರೋಹಿ ।
ಪುತ್ರಗತಿ ಪಗೆಯಾಗಿ ಬೆಳಗುವಂ ಪರಿಕಿಸೆ ಧ- ।
ರಿತ್ರಿಯಲಿ ಕುಮುದಾಳಿಯೂಳಿಗದೊಳಾರಾಜಿಪಂ ಮತ್ತೆ ಕುಮುದಾಳಿಯು ॥
ಶತ್ರುಗಳೆನುತ್ತೆಮ್ಮನತಿಗಳೆದು ತಪ್ಪದೆ ವಿ- ।
ಚಿತ್ರದಿಂದೇಡಿಪುದಖಿಲ ಮಧುಪರೊಗ್ಗಿನಿಂ ।
ನೇತ್ರದೊಳ್ ನಿಟ್ಟಿಸಲ್ ಬಾರದೆಂದಬ್ಜಗಳ್ ಮುಗ್ಗಿರ್ದವೆಲ್ಲೆಡೆಯಲಿ ॥

(೨೩) ಸಿಷ್ಯಲಾನ್ವಿತನಾಗೆ ಗೆಳೆಯನಹನಮೃತಾಂಶು ।
ಪುಷ್ಕರದೆ ಭಾಸ್ಕರ ಪ್ರಭೆಯುಣ್ಮೆ ದಿನದಿನಕೆ ।
ಸಿಷ್ಕರಿಸಿ ದೂರಸ್ಥನಾದಪಂ ಸತ್ಯಮೆಲ್ಲಿರ್ದಪುದು ಸಿರಿಯೊದಗಲು ॥
ಭಾಷ್ಮಲೆಯು ಮರುಳಾಣ್ಮ ಮುಡಿಯುಲೀ ರಾಜನುರೆ ।
ಶುಷ್ಕಚಂದನದಂತೆ ಬೆಳಗದಪನಿಳೆಯೊಳತಿ ।
ದುಷ್ಕರುಣಿ ದುರ್ಜೀವಿ ಶಶಿಯೆಂದು ಚಕ್ರಾಳಿ ತರಣಿಯಂ ಧ್ಯಾನಿಸಿದುದು ॥

(೨೪) ಬುಧರಥನ ದಿಗ್ವಧುವಮೃತಕಲಶವುಂ ಬಿಡದೆ ।
ಚಮರಿನಿಂ ಪೊತ್ತಂತೆ ಮನ್ಮಥಂ ಕೈರವದ ।
ಹೆದೆಗೈದೆ ಹದವಿಕ್ಕಲೆತ್ತಿರ್ಪ ಪೊಸಸಾಣೆ ಚಕ್ರದಂತೆಳೆಗಾಳಿಯೂ ॥
ಕುದುರೆಯೆಳೆವೆರೆವಲ್ಲೊಳಾಪು~~ಚೊಲದ~~ ।
ಸದಸಿನಂತೈದೆ ಶೋಭೆಯಿನಾಗ ಶಶಿಬಿಂಬ- ।
ಮುದಯಾದ್ರಿಯಾಂತಬೆಳ್ಗೊಡೆಯಂತೆ ಸಂಜನಿಸಿ ರಂಜಿಸಿದುದೇಮೆಳ್ಪಿನಾ ॥

(೨೫) ಗರುಡೋರಗೇಂದ್ರರೋಲ್ ದ್ವಿಜರಾಜನೆನಿಸಿ ಮಿಗೆ ।
ಸುರಧುನೀಧ್ರುವರೊಲಮೃತಾಂಗಿಯಾಗುತೆ ನಿರಂ- ।
ತರಮೈದೆ ಕಪಲಂತೆ ಮೃಡನಂತೆ ಸಂಭ್ರಮಿತನಾಗಿ ಸಂಭ್ರಮಣದಿಂದೇ ॥
ಪುರದಂತೆ ಧುರದಂತೆ ಗೋವ್ರಜಗಳಂ ಪರಪಿ ।
ಭರದೊಳಾರಾಕೇಂದು ಮಂಡಲಂ ಚಂದ್ರಾಶ್ಮ- ।
ಮುರೆ ಕರಗೆ ಕುವಲಯದೊಳಖಿಲ ಕುವಲಯಗಳಂ ಬಿಡದುಣ್ಮಿಸುತ್ತೆಸೆದುದು ॥

(೨೬) ಹರಿನೀಲ ವರ್ಣಮಂ ಪರಿಹರಿಸಿ ವಿಶ್ವಕ್ಕೆ ।
ಹರನತನು ಮಂಗಲಸ್ಫುರಿತ ಶುಭ್ರಾಂಶುವಂ ।
ಗುರುಕೃಪಾ ವೃದ್ಧಿಯಿಂದೀಕಾರ್ತವೀರ್ಯನುರೆ ತುಂಬಿಸಿದನೆನ್ನುವಂತೆ ॥

ಕರುವಾಡದೊಳಗಿರ್ಪ ಕೋಮಲೆಯರೆಳೆನಗೆಯು ।
ಸಿರಿದೆರೆಗಳೆಂಬಂತೆ ಜನಮನೋಲ್ಲಾಸದಿಂ ।
ಪರಿಶೋಭಿಸುತ್ತಿರ್ದುದಚ್ಚಬೆಳ್ದಿಂಗಳಂದಿಂಗಡಲ್ ಪೊಂಗಿದಂತೆ ॥

(೨೭) ದಿವಿಜಗಣ ಪೋಷಿತಂ ದ್ವಿಜನಿಕರಕಧಿನಾಥ ।
ಕುವಲಯ ಪ್ರಿಯ ನಿಶಾಧಿಪನತುಲ ಶಾಂತನುರೆ-।
ನವೆದು ಬಳಿಕಭಿವೃದ್ಧಿಯಪ್ಪವಂ ಸುಖದುಃಖಗಳನರಿತವಂ ಭುವಿಯಲಿ ॥
ರವಿಯೆನ್ನನುರೆ ಕೊಲ್ಲಲೈತಹಂ ಬೆನ್ನಟ್ಟಿ ।
ಕವಡಿಲ್ಲವುಳುಹೆಂದು ಕೊಂಡಾಡಿ ಚಂದ್ರನಂ ।
ದ್ರವಗುಂದಿ ಬಸುರನುರುನಿಶಿಪೊರ್ದಿತೆಂಬಂತೆ ಲಾಂಛನಂ ಕಾಣಿಸಿದುದು ॥

(೨೮) ಲೋಕದೊಳ್ ಪರಿಶುದ್ಧನಾಗಿಹಂ ರಾಕಾಸು-।
ಧಾಕರಂ ದಿವದೊಳರವಿಂದಂಗಳೆಮ್ಮನತಿ-।
ರೇಕದಿಂ ಬಿಡದೆ ಮಿಗೆ ಜರೆದು ನಾಚಿಸುತಿರ್ಪವೀಗಳಾದಿನನಾಥನು ॥
ಆ ಕಡೆಗೆ ವಾರುಣೀ ಸೇವ್ಯನಪ್ಪಾಶೆಯುಂ ।
ಸ್ವೀಕರಿಸಿ ಮುಳುಗಿದಂ ನೋಡೆನುತ ಕೈರವಗ-।
ಳಾಕಮಲನಿಕರಮಂ ಮೂದಲಿಸಿ ನಗುತಿರ್ದವನ್ನೆಗಂ ಕೌಮುದಿಯುಲಿ ॥

(೨೯) ಪೊಡವಿಯುಲಿ ಸರ್ವರ್ಗೆ ಹಿತಕಾರಿಯಾಗಿ ಮಿಗೆ ।
ನಡೆದಪರದಾರುಂಟು ಜಲಧಿಯುಲಿ ಪುಟ್ಟಿ ಮಿಗೆ ।
ಪೃಡಗೊಡನೆ ತಲೆದುಡಿಗೆಯಾಗಿರ್ಪ ಹಿಮಕರಂ ಬೆಳಗೀಯೆ ಕೈರವಕ್ಕೆ ॥
ನಿಡುಲತೆಯ ಸಂಕುಲಕೆ ಮೊಲ್ಲೆಮಲ್ಲಿಗೆಗಳ್ಗೆ ।
ಬೆಡಗಿನ ಚಕೋರಿಗಳ್ಗಮೃತೋಪಮಾನಮಾ-।
ಯ್ತೊಡನೆ ಶತಪತ್ರಾಳಿ ಜಾರಚೋರರ್ಗರಿವ ವಿಷಮಾಯ್ತುದೇಂ ಪೇಳಲಿ ॥

(೩೦) ಅವಗಂ ಲಾವಣ್ಯರಸಭರಿತ ನರ್ಮದೆಯು ।
ರೋವರಿಯ ನಿರ್ಮದೆಯು ಗುಣಸಿಂಧು ಕಾವೇರಿ ।
ಕೋವಿದೆಯುರಘನಾಶಿನೀ ಕೃಷ್ಣವೇಣಿಯುರ ನಿತ್ಯ ಸೌಭಾಗ್ಯ ಸುಖದ ॥
ಜೀವನದೆ ನದಿಗಳೊಲು ಕಾಂತಾನುಕೂಲದಿಂ ।
ತೀವಿ ರಂಜಿಪರನುರೆ ಕಣ್ಗಳಂ ಮತ್ಸ್ಯಪ್ರ-।
ಭಾವದಿಂ ಪೊಳಿಸೀಕ್ಷಿಸುತ್ತೈದೆ ಬೀದಿಯೊಳ್ ಬರುತಿರ್ದನಾಳುವರನು ॥

(೩೧) ಸಲ್ಲಲಿತ ಚಂದ್ರನಂ ಮಿನುಗಿಸುತ್ತಾನನದೆ ।
ವಲ್ಲರಿಗಳಿಲ್ಲದುರುಮಲ್ಲಿಗೆಯನರಳಿಸುತೆ ।
ಬಿಲ್ಲೆಸೆಯುದಂಬುಗಳ ಬೀರುತ್ತೆ ಮರನಿರದೆ ಗಂಧಮಂ ಚಿಗುರಿಸುತ್ತೆ ॥

ನಲ್ಲೆಯರ್ ನಾಗನಂ ತಮತಮಗೆ ಜಡೆಜಡೆಗ-।
ಳಲ್ಲಿ ಮಿಗೆ ತೋರುತ್ತೆ ಪಲಬಗೆಯ ಚಿತ್ರಗಳ-।
ನೆಲ್ಲಮಂ ಮಿರುಗಿಸುತ್ತೊಪ್ಪಿರ್ದರಂಗಜನ ಮುಂಗುಡಿಯ ಸೈನ್ಯದಂತೆ ॥

(೩೨) ಸೊಗಸೀಯುತಖಿಲರ್ಗೆ ಗೋಚರಿಸುತಾಕ್ಷಣಂ ।
ಮಿಗೆ ನಗಿಸುತೀಕ್ಷಿಪಾಕೆಳೆಯರಂ ನುಡಿಸುತೊಗು-।
ಮಿಗೆ ಹರ್ಷದಿಂ ಸ್ಯಂದನದೊಳೈದಿದಂ ಮಂದಿ ಸಹಿತಂದು ಮಂದಿರಕ್ಕೆ ॥
ಮಗನೈದಿದುದನರಿತು ಭೂವರಂ ಕಾಲ್ನಡೆಯೊ-।
ಳಗಲಿ ಕಂಡಕ್ಕರಿಂದಿದಿರಾಗಲರ್ಭಕಂ ।
ಪಗದಿಯಿಂ ಶಂದನವನಿಳಿದಯ್ಯನಡಿಗೊಜನೆ ಮಣಿಮುಕುಟಮಂ ಚಾಚಲು ॥

(೩೩) ನೂನಮಾನಂದ ಮೊಳೆತಾತನಂ ಬಿಕ್ಕಪ್ಪಿ ।
ಮಾನನಿಧಿ ಮಂತ್ರಿಯುಂ ಕುಸ್ತರಿಸಿ ಚತುರಂಗ ।
ಸೇನೆಯುಂ ಬೀಳ್ಕೊಟ್ಟು ಪೊಕ್ಕನರಮನೆಯನಾಸುತನೊಡನೆ ಭೂಪನಾಗ ॥
ತಾನೆ ಪೊಂದಳಿಗೆಯಂ ಪಿಡಿದಾದಿವಾಶ್ವಿನಿಯು ।
ಸೂನುವಿಂಗಾರತಿಯನೆತ್ತಿ ಮಿಗೆ ಪರಸಿ ಸ-।
ನ್ಮಾನದಿಂ ತಳ್ಕೈಸಿ ಕುಶಲಮಂ ಬೆಸಗೊಂಡಳನಸೂಯೆ ಮುಂತಪ್ಪರಾ ॥

(೩೪) ಕ್ಷೇಮಮಖಿಲರ್ಗೆನುತೆ ತನಯ ವಿಜ್ಞಾಪಿಸಲ್ ।
ಭೂಮಿಪಾಲಕನೆಂದನೆಲೆ ಮಗನೆ ಅತ್ರಿಜಂ ।
ಪ್ರೇಮಿಸಿದಸೇನನೆಮ್ಯಾಕುಲದ ವಿದ್ಯಮಂ ನಿನಗದಂ ಪೇಳೆನುತ್ತೆ ॥
ಭೂಮಿಯಲ್ಲಧಿಕಮಂತ್ರೌಘಮಂ ತಿಳುಪಿ ನಿ-।
ಸ್ಸೀಮನೆನಗೆಂದಂ ಧನುರ್ವಿದ್ಯಮಂ ಬಳಿಕ ।
ಕಾಮಿತಂ ಕೈಸಾರ್ದುದೀಗಳೋವಿದರಿಂಗೈತಪ್ಪುದೇನರಿಪೆಂದನು ॥

(೩೫) ತರುಣನತಿವಾಕ್ಪಟುಸ್ಫುರಣೆಯಾವಾಕ್ಯಕಾ-।
ಧರಣಿಪಂ ಸೌರಂಭ ಸಾಗರೋದ್ರೇಕದಿಂ ।
ತರುಣಿಯಂ ನಿಟ್ಟಿಸಲ್ ಮೊಗಮರಳೆ ಹಾರೈಸುತಂದಮಿತಮಾನಂದದೆ ॥
ಸರಿಯುದಾರೆಮಗೆಂದು ಚಿತ್ತದೊಳ್ ಗ್ರಹಿಸುತುಗು-।
ತರತುಷ್ಟಿಗೊಂಡೊಡನೆ ಪವಡಿಸಲ್ ರಾಘವೇ-।
ಶ್ವರನೋಲ್ ಪ್ರಕಾಶದಿಂ ಪೂರ್ವಾದ್ರಿಯಾದವಾಗ್ನಿಯೊಲುದಿಸಿದಂ ತರಣಿಯು ॥

*(೩೬) ಭೂಮಿಸುರ ಬೊಬ್ಬೂರನುರೆ ರಚಿಸಿದೀ ಪರಶು-।
ರಾಮ ರಾಮಾಯಣದ ಷಷ್ಟಮೋಧ್ಯಾಯದೆ-।
ಲ್ಲೀ ಮಹಾಸುತು ಧನಂಜಯ ಪದ್ಯಗಳೊಳಿರ್ಪ ದೋಷಗಳನಾರಿಸುತ್ತ ॥

ನೇಮದಲಿ ಶೋಧಿಸುತೆ ತಿದ್ದಿದ ಕಡೇಕೋಡಿ ।
ಗ್ರಾಮದಲ್ಲಿರುತಿರ್ಪ ಪರಮಯ್ಯ ಹೆಗ್ಗಡೆಯು ।
ಪ್ರೇಮದೌರಸ ಪುತ್ರ ವೆಂಕಪ್ಪನಾ ಶ್ರೀನಿವಾಸನಿತ್ತಶ್ರೀಬಲದೆ ॥

**ಅಂತೂ ಅಧ್ಯಾಯ ೬ ಕ್ಕೆ ಪದ್ಯ ೨೬೮ ಕ್ಕೆ ಮಂಗಳಮಸ್ತು.**

---

## ಶ್ರೀ ಪರಶುರಾಮರಾಮಾಯಣದ ಕಠಿಣ ಶಬ್ದಗಳ ಕೋಶ.

### ೧ ನೇ ಅಧ್ಯಾಯ.

೧. ಶ್ರೀ = ಲಕ್ಷ್ಮಿ (ಶೋಭೆ)
ಆಸ್ಯ = ಮುಖ
ಪವಿ = ವಜ್ರ
೨. ಸರ್ಪಾರಿ = ಗರುಡ
ಜಾಯೆ = ಹೆಂಡತಿ
ಕಂದರ್ಪ = ಕಾಮ
೩. ರಮೇಶ = ಲಕ್ಷ್ಮೀಪತಿ
ಉಮಾ = ಪಾರ್ವತಿ
ಮಾರ = ಕಾಮ
ಮಾರಣ = ಸಂಹಾರಕ
೪ ನಾಗೇಂದ್ರ = ಪರ್ವತೇಂದ್ರ
ನಾಗಾನನ = ಗಜಮುಖ
ಆಗಾರ = ಮನೆ
೬. ಆಗರ = ಖನಿ
ವಾಗೀಶ = ಬೃಹಸ್ಪತಿ
೮. ಪರಿಪಾಡಿ = ಪದ್ಧತಿ (ಕ್ರಮ)
೯. ಸೂರಿ = ಪಂಡಿತ
ರೋಲಂಬ = ಭ್ರಮರ
ರಸಾಲ = ಮಾವಿನಮರ
ಮಾಧವ = ಲಕ್ಷ್ಮೀಪತಿ
೧೦. ಚತುರಾಸ್ಯ = ಬ್ರಹ್ಮ
೧೧. ದ್ವಯ = ಜೋಡು
ವಿಟಪಿ = ಮರ
ಕಟಕ = ಬಳೆ (ಸಮೂಹ)
ಕುಲ್ಯ = ಎಲುವು (ರುಂಡ)
ವಿಧಿ = ಬ್ರಹ್ಮ
ಎರೆಯ = ಗಂಡ (ಪತಿ)
೧೨. ಶರ್ವಾಣಿ = ಶಿವನ ಹೆಂಡತಿ
೧೩. ಶತಕೋಟಿ = ವಜ್ರ
ಗಂಡ = ಗಲ್ಲ
× ಯುಗಮ = ಯುಗ್ಮ = ಜೋಡು
೧೪. ದೀಧಿತಿ = ಕಿರಣ
ಆಮ್ನಾಯ = ವೇದ
ವ್ರಜ = ಸಮೂಹ
ರಜತ = ಬೆಳ್ಳಿ (ಬಿಳೀ)
೧೫. ಮಿತ್ರ = ಗೆಳೆಯ (ರವಿ)
ಸೋಮಕುಲ = ಚಂದ್ರವಂಶ
ಸೋಮ = ಚಂದ್ರ
ಮಂಗಲ = ಶುಭಕರ (ಕುಜ)
ವಿಬುಧ = ಪಂಡಿತ (ಬುಧ)
ಗುರು = ದೊಡ್ಡ (ಬೃಹಸ್ಪತಿ)
ಕವಿ = ಪಂಡಿತ (ಶುಕ್ರ)
ಮಂದ = ನಿಧಾನ (ಶನಿ)
ಫಣಿ = ಸರ್ಪ (ರಾಹು)
ಕೇತು = ಧ್ವಜ (ಕೇತು)

ವಿಧಾತೃ = ಬ್ರಹ್ಮ
೧೬ ಖದ್ಯೋತ = ಸೂರ್ಯ
ಪ್ರದ್ಯುಮ್ನ = ಕಾಮ
ಜಿತ = ಗೆದ್ದಂಥ
೧೭. ಆದಿಕವಿ = ವಾಲ್ಮೀಕಿ
ಅತಿಗಳೆದು = ತಿರಸ್ಕರಿಸಿ
೧೮. ಕಪ್ಪುಗೊರಲ = ಶಿವ
೧೯. ನಿರ್ಭರ = ಅತಿಶಯ
೨೦. ನಗ = ಆಭರಣ
ಕೃತಿ = ಕಾವ್ಯ
೨೧ ಆಮೋದ = ಸಂತೋಷ
×ಪೇಳ್ವಿಸಿ = ಪೇಳಿಸಿ
೨೨ ತತಿ = ಸಮೂಹ
೨೩. ರಂಭೆ = ಬಾಳೆ
ರಂಭೆ = ಅಪ್ಸರೆಯ ಹೆಸರು
×೨೪. ಯದರಿ = ಯರಿಯದರಿ
ಅನಿಶ = ಯಾವಾಗಲೂ
೨೫. ರೇವಾ = ನರ್ಮದಾ
ಧುನಿ = ನದಿ
೨೬. ಸುರಭಿ = ಕಾಮಧೇನು
೨೭. ನೇಸರ್ = ಸೂರ್ಯ
ನಸಿ = ಕೆಡು
೨೯. ಸುಷಿರ = ತೂತು (ಕೊಳಲು)
ನೈಜವೆ = ಸ್ವಭಾವಿಕವಾಗಿ
೩೦. ಅಪಾಚಿ = ದಕ್ಷಿಣ
೩೧. ವಿತರಣ = ದಾನ
೩೨. ಧರೆಯಮರ = ಭೂಸುರ (ವಿಪ್ರ)

---

## ೨ ನೇ ಅಧ್ಯಾಯ.

೩ ಕೆನ್ನ = ಹೆಚ್ಚಾಗಿ
೪. ಎಡೆಗೆಟ್ಟ = ಬಿದ್ದ
ವೈಲದೆ = ಶೀಘ್ರದಿಂದ
೫. ಕಡೆಗಣಿಸಿ = ಸೋಲಿಸಿ (ಕೀಳ್ಮಾಡಿ)
ಒಗ್ಗಿನಿಂದ = ಗುಂಪಿನಿಂದ
೬. ಕೋಕನದ = ಕೆಂದಾವರೆ
ಕುಂಜರ = ಆನೆ
೭. ವಿಪಿನ = ಅಡವಿ
ಅಂತರಾಳ = ಮಧ್ಯ (ನಡುವೆ)
ಸೋವುತ್ತ = ಓಡಿಸುತ್ತ
ಸಬ್ಬ = ಸರ್ವ
ಸುಯಿಧಾನ = ಕಾವಲು
೮. ಕುಂಭಿನೀ = ಭೂಮಿ
ಅಂಡಲೆ = ಪೀಡಿಸು (ಕಾಡು)
೯. ಮಾಗಧಿಯಸುತ = ಲಕ್ಷ್ಮಣ
ಪವಣಿಕೆ = ತಕ್ಕರೀತಿ
೧೦. ಪತಿಕರಿಸಿ = ಆಶ್ರಯವಿತ್ತು
ಕುಸ್ತರಿಸಿ = ಸಮಾಧಾನಪಡಿಸಿ
೧೨. ರಾಜರಾಜ = ಕುಬೇರ
೧೩. ನೇಮನಂ = ನಿಯಮನಂ (ವೈರಿಗಳನ್ನು ದಂಡಿಸುವವನು
೧೫. ಕಲ್ಮಷ = ಕಲಂಕ (ಪಾಪ)
೧೬. ಸಂದಿಗ = ಸಂದೇಹ
೧೮. ಕೈವಾರಿಸು = ಹೊಗಳು
೧೯. ಊಣಯ = ನ್ಯೂನತೆ (ದೋಷ)
ಅನ್ಯೂನತರ = ಬಹಳ
ನೂನಂ = ನಿಜವಾಗಿ
೨೧. ಚಃಕ = ಬೇಗ
೨೨ ವಾಕ್ಪತಿ = ಬೃಹಸ್ಪತಿ
೨೩. ಹರಿಬ = ಯುದ್ಧ

೨೫. ಸೈಪಿಟ್ಟು=ಸಮಾಧಾನಪಡಿಸಿ
೨೬. ಪುರುಡಿಸು=ಹಂಗಿಸು (ಜರೆ)
ಮಾರುತ್ತರ=ಎದುರುತ್ತರ
೨೮. ನೇರದಿಂ=ಸರಲತನದಿಂದ
ಹೋರಿಗಂ=ಮಧ್ಯಸ್ಥನು
೩೧. ಪದುಳಿಸಲ್=ಸಂತೋಷಪಡಿಸಲು
೩೨. ಗ್ರಾಸ=ತುತ್ತು
೩೪. ಶಿಲ್ಕ=ಪಾಶ
ಅಂಘ್ರಿರಕ್ಷೆ=ಹಾವುಗೆ
೩೭. ಜವ=ಯಮ
೩೮. ಹರಿಪದ=ಆಕಾಶ
೩೯. ಸಂಪುಟ=ಕರಡಿಗೆ
ಅಲಘು=ಬಹಳ
೩೯. ಅಳವೇ=ಸಾಧ್ಯವೇ
೪೦ ವೃಶ್ಚಿಕ=ಚೇಳು (ಭ್ರಮರ)
ವೃಶ್ಚಿಕದಲಿ=ವೃಶ್ಚಿಕತಿಂಗಳಲ್ಲಿ
ಐಕಲ್=ಹಿಮ (ಚಳಿ)
೪೧ ವನಲಕ್ಷ್ಮೀ=ಬನಸಿರಿ
ಅ+ಪರ್ಣೆ=ಎಲೆಗಳಿಲ್ಲದಂಥ
ಅಪರ್ಣೆ=ಪಾರ್ವತಿ
ನೀಲಕಂಠ=ನವಿಲು (ಶಿವ)
ಹರಿ=ಗಾಳಿ (ವಿಷ್ಣು)
ಸು+ಪರ್ಣ=ಶ್ರೇಷ್ಠಎಲೆ
ಸುಪರ್ಣ=ಗರುಡ

---

## ೩ ನೇ ಅಧ್ಯಾಯ

ಸೂ:-ಉರು=ಬಹಳ
ಮೈದೋರಿ=ಕಾಣಿಸಿಕೊಂಡು
ಬೆಸಗೊಳಲ್=ಕೇಳಿಕೊಳ್ಳಲು

೧. ಅಣುಗ=ಹುಡುಗ
ಕೈಕೇಯು=ಭರತ
ಪವಣಿಕೆ=ತಕ್ಕರೀತಿ
ಅಗ್ರಜ=ಅಣ್ಣ
ಅನುಜಾತ=ತಮ್ಮ
ಅವಿರಲ=ದಟ್ಟ [ಬಹಳ]
ತವೆ=ಚನ್ನಾಗಿ
ತಣಿಸಿ=ಸಂತೋಷಪಟ್ಟು
೨. ವಲ್ಲಕಿ=ವೀಣೆ
ಗಭಸ್ತಿ=ಪ್ರಕಾಶ [ಸ್ತ.ಸ್ಟ.ತಿ]
ಉಣ್ಮು=ಹುಟ್ಟು
ಶ್ಯಾಮ=ನೀಲವರ್ಣ
ಅಂಚೆ=ಹಂಸಪಕ್ಷಿ
೩. ಅಲರ್=ಹೂವು
ಗೋಣ್=ಕುತ್ತಿಗೆ
ತಿಣ್ಣ=ಭಾರ
ರನ್ನ=ರತ್ನ (ಶ್ರೀ.ಪ್ರ)
ಮುನ್ನುಡಿ=ವೇದವಾಕ್ಯ
೪. ಬಾಯಬೂಟಕ=ರಮಿಸುವ
ದಾಯಗ=ದಾಯಾದಿ
ತಾತ=ತಂದೆ
ಜಾತ=ಮಗ
ನವೆ=ಬಳಲು
೫ ಕೋಲ=ಬಾಣ
ಉಗಿ=ನಡು
ಪಿಡುಕುತ=ಹೊರಳಾಡುತ
ಅಕ್ಕರ್=ಪ್ರೀತಿ
ಕುಡಿ+ಪರಿದು=ಚಿಗುರು ಹಬ್ಬಿ
ಪಗೆ=ಹಗೆ

---

೬. ಪಗೆ=ಹಗೆತನ

ಮಾಜು = ಮುಚ್ಚು (ಬಚ್ಚಿಡು)
ಮರವು = ವಿಸ್ಮೃತಿ
೭ ಪ್ರವರ = ವಂಶ (ಕುಲ)
ಸೋಮ = ಚಂದ್ರ
ಪರ = ಅನ್ಯ
೮ ಕಜ್ಜ = ಕಾರ್ಯ
ಹಿಂಗದೆ = ಅಳಿಯದೆ
ನಂಜು = ವಿಷ
ಪೊಂದಿಪ = ಹೊಂದಿಸುವ
ಮಗುಳೆ = ಮರಳಿ
ಪೂರ್ವಮಂ = ಹಿಂದಿನದ (ವೈರವ)ನ್ನು
೯ ವಿರಸ = ಅಪ್ರೀತಿ
ಸರಸ = ಪ್ರೇಮ
ಪರಿಹಾಸಕ = ನಗಚಾಟಿಕೆ.
ಸಂದಿಗ = ಸಂದೇಹ
ಮಂದಸ್ಮಿತ = ಮುಗುಳ್ನಗೆ
೧೦ ಫಣಿ = ಶೇಷ
ತಲ್ಪ = ಹಾಸಿಗೆ
ಆದಿಭೌತಿಕ = ಪಂಚಮಹಾಭೂತ
೧೧ ಭೋಗಿನೀ = ಪಟ್ಟದ ರಾಣಿಯ ಹೊರತು ಇರುವ ನೃಪಸ್ತ್ರೀ
ಕಮಲಾಸನ = ಬ್ರಹ್ಮ
ಅದ್ರಿರಿಪು = ವಜ್ರ
ಭದ್ರಮಯ = ಶುಭಕರ
ಸಾಲೋಕ್ಯ = ಚತುರ್ವಿಧ ಮುಕ್ತಿಯಲ್ಲಿ ಒಂದು ಮುಕ್ತಿ
ವಿದ್ರುಮ = ಹವಳ
ಅಧರ = ಕೆಳದುಟಿ
ಕಲಿತ = ಕೂಡಿದ

೧೨ ರಾಜೀವ = ಕಮಲ
ವಕ್ಷೋಜ = ಸ್ತನ (ಕುಚ)
ಇರುಬು = ಇಕ್ಕಟ್ಟು
ಕಳೇವರ = ಶರೀರ
೧೩ ಶ್ರುತಿ = ವೇದ (ಕಿವಿ)
ಸುಕೃತ = ಪುಣ್ಯ
ಪ್ರತಿ = ಎರಡನೆಯ
ಪೆಣ್ಗಳ್ = ಹೆಣ್ಣುಗಳು
ಶತಪತ್ರ = ನೂರೆಲೆ (ಕಮಲ)
೧೪ ಸುಸ್ಮೇರ = ಯೋಗ್ಯವಾದನಗೆ
೧೫. ಗೋಪ್ಯದೆ = ರಹಸ್ಯದಿಂದ
ವೈಕುಂಠಗೆ = ವಿಷ್ಣುವಿಗೆ
೬. ಮಾಲಕುಮಿ = ಮಹಾಲಕ್ಷ್ಮಿ
ಎಸಗಿ = ಮಾಡಿ
ಸಿಂಧು = ಸಮುದ್ರ
ದಿವಿಜ = ದೇವತೆ
೧೭ ಅಂಬುಜ = ಕಮಲ
ಅಂಬಕ = ಕಣ್ಣು
ಇನೆಯಳ್ = ಪ್ರಿಯಳು (ಲಕ್ಷ್ಮಿ)
ಕೈವಾರ = ಹೊಗಳಿಕೆ
ಬಿನದ = ವಿನೋದ
ಉಗ್ಗಡಿಸು = ಹೊಗಳು
೧೭ ಐದಲು = ಹೋಗಲು
ಪಚ್ಚಡಿ = ಸಣ್ಣ ಸಣ್ಣ ತುಂಡು
ಗೆಯ್ವೆ = ಮಾಡುವೆ
ರಚ್ಚೆನೆ = ರೋಷಾವೇಶದಿಂದ
ಪ್ರವ = ಶ್ರೇಷ್ಠ
×ಮೊಗಂದದೇಂ = ನಿನಗಂದುದೇಂ
ಕನಕಾಂಗ = ಹಿರಣ್ಯಕಶಿಪು
ಪರಿವೇಷ್ಟಿಸು = ಸುತ್ತುಗಟ್ಟು

ತಿರ್ಯಕ್ = ಅಡ್ಡ
ತಿರ್ಯಕ್ಕ್ಬವಿಗ = ಭೂಮಿಗೆ ಗರ್ಭವು ಅಡ್ಡಾಗಿರುವ ಪಶು
೧೮. ತಿರಿದೆ = ಬೇಡಿದೆ
ಗೋವಿಂದನೀ = ಲಕ್ಷ್ಮೀ
ಗಡ = ಅಲ್ಲವೇ
ತಿರುಕುಳ = ಭಿಕ್ಷುಕ
ಖತಿವಡಸಗಿ = ಸಿಟ್ಟು ಹೆಚ್ಚಾಗಿ
ತಾಮಸೀ = ರಾತ್ರಿ
ಒದಗಿ = ಅವತರಿಸಿ
ಸವರ್ = ನಾಶವಾಡು
೧೯. ಭವದೀಯ = ನಿನ್ನ
ನವ = ನೂತನವಾದ
ಸುದರ್ಶನ = ಶುಭವಾದ ನೋಟ
ಎಸಗಿರ್ದೆಂ = ಮಾಡಿದ್ದೆನು
ಭವ = ಸಂಸಾರ
ಬಂಧ = ಪಾಶ (ಕಟ್ಟುವಿಕೆ)
ದೂಸಿಕಂ = ಹಳಿವವನು
ಸಿದ್ಧಾಂತಂ = ನಿರ್ಣಯವು
ಸುಶು = ಕಾಮಧೇನು
ನೆವ = ನಿಮಿತ್ತ
೨೦. ಭೂಚಕ್ರ = ಭೂಮಂಡಲ
ಉನ್ನತಿಯ = ಅಭಿವೃದ್ಧಿ ಪಡೆದ
ಮಸಗಿದ = ಸಿಟ್ಟಾದ
ಎಳಸದೆ = ಇಚ್ಛಿಸದೆ
೨೧. ಕೂರ್ಮೆ + ಕಲಹ = ಪ್ರೀತಿಯ ಜಗಳ
ಅವಗಡೆ = ದುಃಸ್ಥಿತಿ
ಅಘಟು — ಪರಾಕ್ರಮ
ಬಂಡವಾಳ್ = ಸಂಗ್ರಹ
ಬೀಳ್ಕೊಂಡು = ಕಳುಹಿಸಿಕೊಂಡು

ಬಿಜಯಂಗೆಯ್ = ಹೊರಡು
೨೨. ಪಜ್ವಳಿಪುದೇಂ = ಪ್ರಜ್ವಲಿಸುವದೇನು
ಸಮನಿಸಿತು = ಉಂಟಾಯಿತು
ತತಿ = ಸಮೂಹ
ಪಠೌಳಿ = ಮಸ್ತಕ
ಕರಸಂಪುಟ = ಜೋಡಿಸಿದ ಕೈ
ನೀಲದಿಂ ತೃಣಪೂಜ್ಯ = ನೀಲ ಮಣಿಯನ್ನು ತಲೆಯಲ್ಲಿ ಧರಿಸಿದರೆ ಅದು ಹುಲ್ಲಿನಚೂರನ್ನು ಆಕರ್ಷಣದಿಂದ ಹಿಡಕೊಳ್ಳುವುದು.
ಸಾಯುಜ್ಯ = ಮುಕ್ತಿ
ಪಗೆಯಾದುದು = ದೂರಾದುದು
೨೩. ಮೃಗಾಂಕ = ಚಂದ್ರ
೨೪. ವೃಷ = ಶಿವ
ಮಖ = ಯಜ್ಞ
ಆರಾಮ = ತೋಟ
ತೊರೆ = ನದಿ
ಇಡಿಕಿರಿದ = ದಟ್ಟವಾದ
ತೊಡರಿ = ಹತ್ತಿಕೊಂಡು
ಎಸೆ = ಶೋಭಿಸು
ಪುಳಿನ = ಉಸುಬಿನ ಸ್ಥಳ
ಪೆಂಪು = ಮಹಿಮೆ
೨೫. ಕೊಲೆ = ಕೊಲ್ಲುವಿಕೆ
ಕಳೆ = ಕಿತ್ತುಒಗೆ (ಕಾಡಹುಲ್ಲು)
ಪಂಕ = ಕೆಸರು
ಭಂಗ = ನಾಶ (ತೆರೆ)
ಪದ್ಮಮಯ = ಕಮಲಗಳಿಂದ ತುಂಬಿದ
ಕಾಸಾರ = ಸರೋವರ
ಪಾದರಿ = ಹಾದರಗಿತ್ತಿ (ಪಾಟಲಿಪುಷ್ಪ)

ವಂಶಕಂಟಕ = ಕುಲನಾಶಕ
ವಂಶ = ಬಿದಿರು
ಕಂಟಕ = ಮುಳ್ಳು
೨೬. ಎಳೆ = ತಂತು (ಜಗ್ಗು)
ಅಳಿ = ಭ್ರಮರ (ನಾಶವಾಗು)
ಅರೆ = ಬಂಡೆಗಲ್ಲು (ತಿಕ್ಕು)
× ಪುಡಿಯೆಂಬ = ಮರಲೆಂಬ
ಮರಲ್ = ಉಸುಬು (ತಿರುಗು)
ಕರಿ = ಆನೆ (ಸುಟ್ಟುಹೋಗು)
ಮೆಟ್ಟು = ಪಾದರಕ್ಷೆ (ಒದ್ದುಕೊಳ್ಳು)
ಕಳೆ = ಚಂದ್ರಮಂಡಲದ ೧೬ ನೆಯ ಭಾಗ (ನೀಗು, ಕಿತ್ತುಒಗೆ)
ಪೊಡೆ = ಹೊಟ್ಟೆ (ಹೊಡೆ)
ಘೋರ = ಶಿವ (ಭಯಂಕರ)
ಭಂಗಿಪ = ಕೇಡಾಗುವ (ಬೈಯ್ಯುವ)
೨೭ ಆಮೋದ = ಆನಂದ
ಮತ್ಯಾತರಿಂ = ಮತ್ತೆ + ಏತರಿಂ
ಊಣಯ = ಕೊರತೆ
ಸಂಜ್ಞೆ = ಸನ್ನೆ
ಅಂ = ನಾನು (ನಾರದ)
೨೮ ಬಂಜೆಗ = ಮಕ್ಕಳಿಲ್ಲದವ
ಜಂಜಡ = ಭಾರ (ತೊಂದರೆ)
ನಂಜು = ವಿಷ
ಮುಸುಡು = ಮೊಗ
ಮುಸುಳಿಸು = ಕಳೆಗುಂದಿಸು
ಮುನ್ + ಸೆರಗು = ಮುಂದಿನಸೆರಗು
ನಯನ + ಅಂಬು = ಕಣ್ಣೀರು
೨೯. ಉಡುಗಿ = ಕಿರಿದಾಗಿ
ಕಿಂಚಿತ್ + ರವದೆ = ಕಿರುದನಿಯಿಂದ

ಕಡೆಹಾಯಿಸು = ಪಾರುಗಾಣಿಸು
ಈಡು = ಜೋಡು
೩೦. ಕಾರ್ಪಣ್ಯ = ಕನಿಕರವಾದ
ಮಿಡುಕುವ = ಹೊರಳಾಡುವ
ಪುರಂದರ = ಇಂದ್ರ
ಈಪ್ಸಿತ = ಬಯಕೆ
೩೧. ಸುರಪುರ = ಅಮರಾವತಿ
ಕಂತುಮಾತ್ರ = ನಿಮಿಷಮಾತ್ರ
ಸಮನಿಸು = ಉಂಟಾಗು
ಮೊಳೆದೋರು = ಹುಟ್ಟು
ಅಳಲು + ಒಕ್ಕಣಿಕೆ = ದುಃಖದ ಮಾತು
ಮೋಡಿ = ಚಿಂತೆ
ಸೊಕ್ಕು ಜವ್ವನೆ = ಪ್ರಾಯದ ಹೆಂಗಸು
೩೨. ಮುನ್ + ಪನಿ = ಮೊದಲಿಗೆ ಬೀಳುವ ಮಳೆಹನಿ
ಸೊಗ = ಸುಖ
ಕರಣ = ಇಂದ್ರಿಯ
ವಾಮ = ಎಡ
ತರ್ಜನಿ = ಹೆಬ್ಬೆರಳಿಗೆ ತಾಗಿದ ಬೆರಲು
೩೪. ನೀರೆ = ಸುಂದರ ಸ್ತ್ರೀ
ಪುಷ್ಪವತಿ = ಮುಟ್ಟಾದವಳು
೩೫. ಫೇನ = ಬುರುಗು (ನೊರೆ)
ಪಿಂಡು = ಸಮುದಾಯ
ತನಿ = ಪೂರ್ಣ
ಬಿಂಕ = ಸೊಕ್ಕು
ಜೋನಿ + ಕರೆದ = ಪ್ರವಾಹಗೊಂಡು

ಉಕ್ಕಿ = ಹೊರಸೂಸಿ
ಸುರತರು = ಕಲ್ಪವೃಕ್ಷ
ಬ್ರಹ್ಮಹತಿ = ಬ್ರಾಹ್ಮಣವಧೆಯ ಪಾಪ
ಶೇಣಿ = ಶ್ರೇಣಿ (ಸಮೂಹ)
×ಅಪ್ಪಳಿಸಿ = ಅಪ್ಪಳಿಸೆ
ನಿತಂಬಿನಿ = ಸ್ತ್ರೀ (ಇಲ್ಲಿ ರಾಣಿ)
ಅಲರಾಗಿ = ಪುಷ್ಪವತಿಯಾಗಿ
ಮುಡಿ = ತುರುಬು
ಕಲಕಿ = ಅಸ್ತವ್ಯಸ್ತವಾಗಿ
ಪೀನ = ಪುಷ್ಟ
ನಿಗುಚಿ = ನಿಗುರಿ (ಸೆಟೆದು)
ನೀವಿ = ವಸ್ತ್ರದ ನಿರಿಗೆ
೩೬ ಸೀಲ = ಉದ್ಧವಾದ
ಆಳಿಕೆಯ = ಕೂದಲುಳ್ಳವಳ
ರಾಗಸುಸ್ಫೋಟಕ = ಕೆಂಪಾದ ಮೊಡವಿನ ಹುಗುಳ
೩೬ ಕುಸುಮಾಸ್ತ್ರಕಲೆ = ಮದನವಿಲಾಸ
ಉಪರತಿ = ತೃಪ್ತಿ
ಬಿಂಬ = ತೊಂಡೆಯ ಹಣ್ಣು
ರಕ್ತ = ಕೆಂಬಣ್ಣ
ಕಮಲಾಪ್ತ = ಸೂರ್ಯ
೩೭. ದರ್ಪಣ = ಕನ್ನಡಿ
ಕದಪು = ಗಲ್ಲ
೩೮ ಮಿಥುನ = ಜೋಡು (ದಂಪತಿ)
ಸಲ್ಲಾಪ = ಸಂಭಾಷಣೆ
ನಖಕ್ಷತ = ಉಗುರಿನ ಗಾಯ
ಹಿಮಾಂಶು = ಚಂದ್ರ
ಕಂದರ್ಪ = ಕಾಮ
ದಿವಾಶ್ವಿನಿ = ಮಖವೀರ್ಯನ ಹೆಂಡತಿಯ ಹೆಸರು

ನಂದನ = ವನ (ತೋಟ)
ಪೆಂಪು = ಕೀರ್ತಿ (ಮಹಿಮೆ)
೪೯. ಕರಜ = ಉಗುರು (ನಖ)
ಪ್ರಹರಣ = ಹೊಡೆತ (ಕ್ಷತ)
ಹರಿಬ = ಕೆಲಸ (ಯುದ್ಧ)
ಕಾಮ್ಯಾರ್ಥ = ಬಯಸಿದ ವಸ್ತು
ಒಲ್ದು = ಮೆಚ್ಚಿ
೫೦. ಪುಲಕ = ಮೈಗೂದಲು ನೆಟ್ಟಗಾಗೋಣ.
೫೧. ಧಮ್ಮಿಲ್ಲ = ತುರುಬು
ಕಾಂಚಿ = ಒಡ್ಯಾಣ
ಕಿಂಕಿಣಿ = ಕಿರುಗೆಜ್ಜೆ
ಮೊಳಗು = ಗುಡುಗು
ಭ್ರೂ = ಹುಬ್ಬು
ಶರ = ನೀರು
ಸುರಚಾಪ = ಇಂದ್ರ ಧನುಸ್ಸು
೫೨ ಪರ್ಯಂಕ = ಮಂಚ
ರಾಮಣೀಯಕ = ಮನೋಹರ
ಕೋವಿದ = ಪಂಡಿತ
ಪವಡಿಸು = ಮಲಗು
೫೩ ಸೂತ್ರಧಾರ = ದೇವರು
೫೪ ಸಂವೇಶ = ನಿದ್ರೆ
ನಿಕ್ಷೇಪ = ಹುಗಿದಿಟ್ಟ ಧನ
ಶಾರ್ವರ = ಕತ್ತಲೆ
ಸಪತ್ನ = ವೈರಿ
ಉಳಿದು = ಬಿಟ್ಟು
೫೫ ಕಾದಲರ್ = ದಂಪತಿಗಳು
ಕಡಿಯಾಣ = ಕಟ್ಟಾಣಿ (ಕುದ್ಧ)
೫೬ ಅಂಕುರಿಸಿ = ಹುಟ್ಟಿ
ಅಗ್ರ = ತುದಿ

ಕುಟ್ಮಲ = ಮೊಗ್ಗೆ
೪೭. ಕಾಂಚೀಯೋಗ = ಒಡ್ಯಾಣದ ಜೋಡಣೆ. (ಬೆಳಸುಪಿಕೆ)
ಕೈರವ = ನೈದಿಲೆ
ಪುಂಡರೀಕ = ಬಿಳೀ ತಾವರೆ
ಅಮೃತಾಂಶು = ಚಂದ್ರ
ಬಿಂಬ = ಮಂಡಲ
೪೮ ಕಾಮುರ್ಕ = ಬಿಲ್ಲು
ಕಾಮುರ್ಕ = ಕಪ್ಪುಮೊಗವುಳ್ಳ (ಚೂಚುಕ)
ಪಯೋಧರ = ಮೋಡ (ಸ್ತನ)
ವರ್ಷಸಾಮೀಪ್ಯ = ಮಳೆಗಾಲದ (ನವಮಾಸತುಂಬಲಿಕ್ಕೆ) ಸಮೀಪ
ಸೋಮುರ್ಡಿ = ಜೋಲುವ ತುರುಬು
ಆಳಿ = ಸಖಿ
೪೯ ಕಾಂಚಿಕಟಿ = ಒಡ್ಯಾಣ ಹಾಕುವ ಪ್ರದೇಶ (ಸೊಂಟ)
ಮಿತ್ರೆ = ಗೆಳತಿ
ಚೇಟಿ = ದಾಸಿ
ಮಂತ್ರಣ = ಏಕಾಂತ
೫೦. ಉಭಯ = ಎರಡನೆಯ
ಚರಣ = ಪಾದ
ಪ್ರತತಿ = ಸಮೂಹ
೫೧ ಕ್ಷೋಣಿ = ಭೂಮಿ
ಮೆಚ್ಚು = ಉಡುಗೆರೆ
೫೨ ಅಬ್ಬೆ = ತಾಯಿ
ಸಾಟಿ = ಸರಿ
೫೩. ಕಣ್ + ತಣಿ = ಕಣ್ಣಿಗೆ ತೃಪ್ತಿಯಾಗು
೫೪. ಸಂಕುಲ = ಸಮೂಹ

ತೊರೆದು = ತುಂಬಿ
ಒಗು = ಹೊರಚಲ್ಲು
೫೫. ಮೀಸಲ್ = ತಾಜಾ [ಅನ್ಯರುಪಭೋಗಿಸದಂಥ]
ಒಳಲೆ = ಚಿಪ್ಪು
× ಮಲಗಿಸತ್ತಾ = ಮಲಗಿಸುತ್ತಾ
೫೬. ಒಸಗೆ = ಸುದ್ಧಿ
× ಗಾಡಿಗಳೊಳಿಳಿವ = ರಥಗಳಲ್ಲಲಿವ ತೇರಿನಲ್ಲಿ ತೂಗಾಡುವ
ಕಿರಿಮಂಚ = ಸಣ್ಣ ಮಂಚ
೫೭. ಕರಣೀಕ = ಶಾನಭಾಗ (ತಲಾಟಿ)

---

## ೫ ನೇ ಅಧ್ಯಾಯ.

ಸೂ:- ಲೋಲ = ಚಂಚಲ
೧. ಹರಿಣಧರ = ಚಂದ್ರ
ಸಿರಿಕಂಡ = ಶ್ರೀಗಂಧ
೩. ಅಬುದ = ವರ್ಷ
೬. ಒಲಿಪು = ವೈಯ್ಯಾರ
೭. ಅಂಬರ = ವಸ್ತ್ರ (ಆಕಾಶ)
ಗುಂಭ = ಗುಪ್ತ
ಅಂಬುದ = ಮೋಡ
೮. ತರಂಗಿಣೀ = ನದಿ
ಜುಣಾಗು = ಹೋಗು (ತಿರುಗು)
೯. ತರುವಲಿ = ಹರೆಯದ ಹೆಣ್ಣು
ಕಲಭ = ಆನೆಯ ಮರಿ
೧೦. ಕಾಶಿ = ನಡುವಿಗೆ ಕಟ್ಟಿಕೊಳ್ಳುವ ವಸ್ತ್ರ
೧೧. ಚಾಗ = ತ್ಯಾಗ [ದಾನ]
೧೩. ಅನ್ವಯ = ವಂಶ
ಉಭಯನೇಕಾದಶ = ಇಪ್ಪತ್ತೆರಡು

ದೋರ್ದಂಡ = ತೋಳು

೧೪ ಪರಿವೇಷ = ವಲಯು [ಕಣ]

೧೫. ಗಂಗಾಸುಕೃತ್ತಿನಿಂದೆ = ಗಂಗೆ ದೊಗಲಿನಿಂದ

೧೬. ವ್ರೀಹಿ = ಭತ್ತ

ಕೋಕನದ = ಕೆಂದಾವರೆ

ಕಾಸಾರ = ಸರೋವರ

ಪಾವುರಿ = ಒಕ್ಕಲಗಿತ್ತಿ

ಉಲುಹು = ಶಬ್ದ

೧೭. ಕೊಂಡೆಯಂ = ಚಾಡಿಯನ್ನು

ಶ್ರುತಿ = ಕಿವಿ [ವೇದ]

ಸ್ಮರ = ಕಾಮ

ಇಭ = ಆನೆ

೧೯. ಅಯನ = ಮಾರ್ಗ

ಪ್ರಪಾನಿಲಯ = ಅರವಟ್ಟಿಗೆಯ ಮನೆ

ಏಸ್ಸೈಸಿ = ಮುತ್ತಿಗೆ ಹಾಕಿ

೨೦. ವಲ್ಲರಿ = ಬಳ್ಳಿ

೨೧. ಕಿಸಲಯ = ಚಿಗುರೆಲೆ

ಅಂಜುಳಿ = ಬೊಗಸೆ

೨೩. ಕಂಬು = ಶಂಖ

೨೪. ಕೂಟಸಾಕ್ಷಿ = ಸುಳ್ಳು ಸಾಕ್ಷಿ

೨೫ ಗೋತ್ರರಿಪು = ಇಂದ್ರ

೨೬. ಮಾಷ = ಉದ್ದು

ಲಾಗು = ಹೆಚ್ಚುವಿಕೆ (ಹಾರಿಕೆ)

೨೭ ಉರ = ಎದೆ

ಬೇಹವಾಗಿ = ಮುಖ್ಯವಾಗಿ

೨೮. ಕೊಂಕು = ಡೊಂಕು

೨೯. ಸದನ = ಮನೆ

ನನೆ = ಮೊಗ್ಗೆ

ಭೋಗಿ = ಸರ್ಪ

೩೦. ಚಂದ್ರಿಕೆ = ಬೆಳದಿಂಗಳು

ವಜ್ರ = ತುಂಬಿ

ಕಾಳಾಹಿ = ಕೃಷ್ಣಸರ್ಪ (ರಾಹು)

೩೧. ಕುರುಳ್ = ಕೂದಲು

ತಿಮಿರ = ಕತ್ತಲೆ

ಚಕ್ರ = ಚಕ್ರವಾಕ

೩೨. ಕದಪು = ಗಲ್ಲ

ದರ್ಪಣ, ಮುಕುರ } = ಕನ್ನಡಿ

೩೪. ಕಟಕಿ = ಹಂಗಿಸುವಿಕೆ

ಮೊಗಸು = ಹುಟ್ಟಿಸು

೩೬. ಪೊಂಪುಳಿ = ರೋಮಾಂಚ

ಕಿವರ್ = ಸುಲಕೊಳ್ಳು

ತಳಪಟ = ಪೂರ್ಣನಾಶ

೩೭. ಮಾಧವ = ವಸಂತ

೩೮. ಶಿಂಗಾಣಿ = ಬಿಲ್ಲು

ಉಯ್ಯಾಲೆ = ಜೋಕಾಲಿ

೪೦. ಒಂದಿಸು = ಕೂಡಿಸು

೪೧. ಕಾಯಜಾಂತಕ = ಮದನಾರಿ

೪೨. ಅಲವಾಲ = ಗಿಡದ ಬುಡಕ್ಕೆ ನೀರು ನಿಲ್ಲುವಂತೆ ಮಾಡಿದ ಕಟ್ಟೆ

೪೭. ಬೀಳುವೆಯು = ಕಪಟದ

೪೯. ಹರಿಯು = ಪ್ರಾಯ

೫೪ ಪೊಂಬುಳಿ = ಪೆಂಪುಳಿ

೫೫. ಪಕ್ಕಣ = ಬೇಡರ ಮನೆ

ಶಿಖಿ = ನವಿಲು

ಅಧ್ವ = ಮಾರ್ಗ

೫೯. ಆವರ್ತ = ಸುಳಿ

ಕಮಠ = ಆಮೆ (ತಾಬೇಲೆ)

ಪುಳಿನ = ಉಸುಬಿನ ಸ್ಥಳ
೬೦. ನಿಗಮ = ವೇದ
೬೨ ಅಂಡಿಸು = ಮರೆಯಾಗು
೬೩ ನಿಕೇತನ = ಮನೆ
೬೪. ವರ್ಣಿ = ಬ್ರಹ್ಮಚಾರಿ

---

### ೫ ನೆಯ ಅಧ್ಯಾಯ.

೧. ವೈಖರಿ = ಚಂದ
ಶ್ರೀಕರ = ಚಂದವಾದ
೨. ಶಾರ್ದೂಲ = ಹೆಬ್ಬುಲಿ (ಶ್ರೇಷ್ಠ)
ಶಿಖಿ = ಅಗ್ನಿ
ದಶನಾಳಿ = ಹಲ್ಲುಗಳ ಸಾಲು
೩. ತ್ರಿಗುಣಾತ್ಮ = ದತ್ತಾತ್ರೇಯ
೮. ಜೇವಡೆ = ಹೆದೆಯನ್ನು ಜಗ್ಗಿ ಟಂಕಾರ ಮಾಡು
೧೩. ಚಣ = ಕ್ಷಣ
೧೬. ಸೆಣಸಲು = ಕಾದಲು
೧೭. ಅಲವರ್ಕಿ = ಭ್ರಮರ
ಕುವಲಯ = ಭೂಮಂಡಲ
ತಿಲಕ = ಹಣೆಯ ಮೇಲೆ ಹಚ್ಚಿದ ಕಸ್ತೂರಿ ಮುಂತಾದವುಗಳ ಬೊಟ್ಟು (ಶ್ರೇಷ್ಠ)
೨೨. ಬವಣೆ = ಜನ್ಮ (ಹುಟ್ಟೋಣ)
ವಿಶಿಖ = ಬಾಣ
೨೫. ರೌರವ = ಒಂದು ನರಕ
೨೬. ನಾರಿ = ಹೆದೆ (ಸ್ತ್ರೀ)
೨೭. ಕುಲಿಶ = ವಜ್ರ
೨೮. ಮಿಳಿಂದ = ದೊಡ್ಡ ಗುಂಗೀಹುಳ
ವ್ಯೋಮಕೇಶ = ಈಶ್ವರ
ಅಪಚಿತಿ = ಪೂಜೆ
೩೦. ಬೇಳ್ಪುದು = ಬೇಡುವುದು
೩೧. ವಜ್ರಬಂಧ = ಬಿಗಿಯಾಗಿ ಕಟ್ಟುವಿಕೆ
೩೨ ಭಾರ್ಗವ = ಪರಶುರಾಮ
೩೩. ಶಿಖಿ = ಅಗ್ನಿ ಸಂಖ್ಯಾ ಸಂಜ್ಞೆ (೩.)

### ೬ ನೆಯ ಅಧ್ಯಾಯ.

ಸೂ:- ಕೋವಿದ = ಪಂಡಿತ
೨ ವಿತತಿ = ಸಮೂಹ
ಪೋತ = ಮರಿ
೬. ಪಿಕ = ಕೋಗಿಲೆ
ನೆನಸು = ನಿಶ್ಚಯ (ಧ್ಯಾನ)
೧೦. ಕೂಲ = ತೀರ (ದಂಡೆ)
೧೧. ವಿಭು = ಒಡೆಯ
೧೨. ಸಟಾ = ಜಡೆ
ಮುನ್ನುಡಿ = ಆರಂಭದ ಮಾತು.
೧೩. ಶಶಿಸಹೋದರ = ದತ್ತಾತ್ರೇಯ
೧೪. ಆರ್+ಕಾಲ = ಆರುವರ್ಷ
೧೭ ಪರಿಣಯ = ಮದುವೆ
೧೮. ವಾಹಿನಿ = ಸೇನೆ
೧೯. ವ್ಯಾಲ = ಸರ್ಪ
ಅಢ್ಯ = ಬಲಿಷ್ಠ
ಸೆಡೆ = ಅಂಜು
೨೨. ಮಧುಪ = ತುಂಬಿ (ಹೆಂಡಗುಡಕ)
೨೩. ಪುಷ್ಕರ = ಆಕಾಶ
ಮರುಳಾಣ್ಮ = ಈಶ್ವರ
೨೪. ಬುಧರಥ = ಇಂದ್ರ (ಪೂರ್ವ)
ಸದಸಿ = ಸಭೆ (ಚಾವಡಿ)
೨೫ ದ್ವಿಜ = ಪಕ್ಷಿ, ಸರ್ಪ (ನಕ್ಷತ್ರ)
ಅಮೃತ = ನೀರು, ಸಾವಿಲ್ಲದ್ದು, ಸುಧಾ

ಸಂಭ್ರಮಿತ = ಭ್ರಮಣವುಳ್ಳ;
ಭ್ರಮೆಹಿಡಿದ; ಸಂಚಾರವುಳ್ಳ.
ಗೋ = ಅಕಳು, ಬಾಣ, ಕಿರಣ
ರಾಕೇಂದು = ಹುಣ್ಣಿಮೆಯ ಚಂದ್ರ
ಚಂದ್ರ+ಅಶ್ಮ = ಚಂದ್ರಕಾಂತ
ಕುವಲಯ = ಭೂಮಂಡಲ (ಕಪ್ಪು ತಾವರೆ)
೨೬. ಹರಿ = ವಿಷ್ಣು
ನೀಲವರ್ಣ = ಶ್ಯಾಮವರ್ಣ
ಶುಭ್ರಾಂಶು = ಬಿಳಿಯ ಕಿರಣ (ಚಂದ್ರ)

ಇಂಗಡಲ್ = ಕ್ಷೀರಸಾಗರ
೨೭. ದಿವಿಜ = ದೇವತೆ
ದ್ವಿಜ = ನಕ್ಷತ್ರ
ಕವಡು = ಕಪಟ
ನಿಶಿ = ಕತ್ತಲೆ
ಲಾಂಛನ = ಗುರ್ತ
೨೮. ಅಶೆ = ಅಪೇಕ್ಷೆ (ದಿಕ್ಕು)
೨೯ ಜಡಧಿ = ಮಂದಬುದ್ಧಿ (ಸಮುದ್ರ)
೩೦ ಪಗಡಿ = ನಡಾವಳಿ

---

ವಿ. ಸೂ. ಪರೀಕ್ಷೆಗೆ ಹೋಗುವ ವಿದ್ಯಾರ್ಥಿಗಳಿಗೆ ಉಪಯೋಗವಾಗವಂತೆ ಈ ಭಾಗದ ಕಠಿಣ ಶಬ್ದಾರ್ಥಗಳನ್ನು ಶ್ರೀ॥ ಮಹಾಬಲ ಶಂಕರ ಹೆಗಡೆಕರ್, ಬಿ. ಎ, ಫೆಲೋ ಮತ್ತು ಶ್ರೀ॥ ಮಂಜನಾಥ ಪಾಂಡುರಂಗ ಕಾಮತ ಕನ್ನಡ ಶಾಲಾಧ್ಯಾಪಕ ಕುಮಟಾ ಇವರಿಂದ ಬರೆಯಿಸಿ ಜೋಡಿಸಿರುತ್ತದೆ.

## ಬಿನ್ನಹ.

ಮಾ॥ ಷ॥ ಸ್ಮರಿಪೆನುರು ಕರ್ಣಾಟಭಾಷಾವಿಚಕ್ಷಣರ್ ।
ಕರುಣಿಸಿದನಲ್ಪೋಪಕಾರಮಂ ಮೊದಲನೆಯ ॥
ಸರಣಿ ಮುದ್ರಣದೊಳೊದಗಿಹದೋಷಗಳನಾಯ್ದು ತಿದ್ದಿಸರಿಪಡಿಸಿ ಮತ್ತೆ ॥
ಬರಿಸುತೆ ಪರೀಕ್ಷೆಗೈದುವ ಛಾತ್ರವರ್ಗಕೋ-।
ಸ್ಕರಮೀಗ ಕಠಿಣ ಶಬ್ದಾರ್ಥಮಂ ಸಖರಿಂ ಸ್ರ-।
ಚುರಪಡಿಸಿದೆಂ ಭವಿಷ್ಯಾನುಕೂಲತೆಯನುರೆ ನಂಬಿ ಧಾರೇಶ್ವರದಲಿ ॥
(೨) ಕರುಣದಿಂ ಸಕಲಕರ್ಣಾಟ ಭಾಷಾಭಿಜ್ಞ-।
ರಿರಿಸಿ ದಯೆಯಂ ಸ್ವಪರಹಸ್ತದಿನೆನಗೆ ನಿರಂ-।
ತರ ಬಲವನಿತ್ತೆನ್ನಣಿಲಸೇವೆಗೊಂಬೊಲೆಸಗಲ್ ರಾಮನೊಳ್ ಬೇಡುತೆ ॥
ಮರಳಿದುಂ ಶಾಲಿವಾಹನ ಶಕದ ನಿಧಿವೇದ।
ಕರಿಧರಾಬ್ದಕ್ಕೆ ಸರಿಯಾದ ಪ್ರಭವಾಖ್ಯ ವ-।
ತ್ಸರದ ವೈಶಾಖಾಂತ್ಯಸಪ್ತಮಿಯು ಶಶಿವಾರದೊಳ್ ಪ್ರಕಟಿಸಲ್ಪಟ್ಟುದು ॥

ಸಕಲ ಸುಜನ ವಿಧೇಯ,
ವೆಂಕಪ್ಪಾ ಪರಮಯ್ಯಾ ಹೆಗ್ಗಡೆ, ಕಡೇಕೋ

ಥಮ ಮಣಿ ಸಂಪೂರ್ಣಂ.